ಶ್ರೀಃ

॥ ಶ್ರೀ ಸುಬ್ರಹ್ಮಣ್ಯಃ ಪ್ರಸನ್ನಃ ॥

## ಸ್ಕಾಂದಪುರಾಣಾಂತರ್ಗತ

# ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣಮ್

---

## ಮಂಗಲಾಚರಣಮ್

•••೧•••

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥
ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುಃ ದೇವೋಮಹೇಶ್ವರಃ ।
ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ ॥

ನತ್ವಾ ಬ್ರಹ್ಮಣ್ಯಲಿಂಗಂ ಗುರುವರಮನಿಶಂ ನಾಕಪಂ ದೇವವಂದ್ಯಮ್
ಭಕ್ತಾನಾಮಿಷ್ಟದಂ ತಂ ಭವಭಯಹರಣಂ ಭಾಸ್ವರಂ ಸ್ವಪ್ರಕಾಶಂ ।
ಶ್ರೀಗೌರೀಭಾರತೀಡ್ಯಂ ದುರಿತಗಣಹರಂ ವೇದಬೋಧಸ್ವರೂಪಮ್
ಸದ್ವಂದ್ಯಂ ಭಾರ್ಗವೀಯಸ್ಥಲ ಭಯಹರಣಂ ಚಿಂತಯೇನ್ನಿಷ್ಕಲಂಕಮ್ ॥ ೧ ॥
ವರೇಣ್ಯಂ ವರದಂ ವಂದ್ಯಂ ವಾಗೀಶಂ ಗುರುಸೇವಿತಮ್ ।
ವಂದೇ ಮಹಾಗುರುಂ ಶಾಂತಂ ವಂದಿತಂ ವಂದ್ಯಕರ್ಮಭಿಃ ॥ ೨ ॥
ಮಯೂರವಾಹನಂ ದೇವಂ ಮದನಾಕಾರಮವ್ಯಯಮ್ ।
ದರ್ಪಣೇ ತತ್ರ ಭಾಸಂತಂ ಸುಬ್ರಹ್ಮಣ್ಯಮುಪಾಸ್ಮಹೇ ॥ ೩ ॥
ಯಜ್ಞಶಾಲಾಸು ಸಂಸ್ತುತ್ಯಂ ಮನೋವಾಗ್ದೃಷ್ಟ್ಯಗೋಚರಮ್ ।
ಮನುಷ್ಯಾಣಾಂ ಹಿತಕರಂ ಮನಸಾ ತಂ ನತೋಽಸ್ಮ್ಯಹಮ್ ॥ ೪ ॥
ಅನ್ನದಂ ಪ್ರಾಣದಂ ನಿತ್ಯಂ ನೃತ್ಯಂತಂ ಯೋಗಿನಾಂ ಹೃದಿ ।
ಆಯುರಾರೋಗ್ಯದಂ ದೇವಂ ಸುಬ್ರಹ್ಮಣ್ಯಮಹಂ ಭಜೇ ॥ ೫ ॥
ಸುಗಣಾನೇಕಸತ್ಪುತ್ರಧನಧಾನ್ಯಾದಿದಾಯಕಮ್ ।
ಸುಖದಂ ಸತ್ಯಶೀಲಾನಾಂ ನಮಾಮಿ ಮನಸಾಽಸಕೃತ್ ॥ ೬ ॥
ಮಾಯಾತೀತಂ ಮಹಾಸೇನಂ ಮಾಯಿನಾಮಗ್ರನಾಯಕಮ್ ।
ಮಾಯಾಭವಾಬ್ಧಿತರಣಾಶ್ರಿತಪೋತಮಹಂ ಭಜೇ ॥ ೭ ॥

# ಅಥ ಪ್ರಥಮೋಽಧ್ಯಾಯಃ

ಶ್ರೀಸೂತ ಉವಾಚ—ಜಾಮದಗ್ನ್ಯ ತಪೋದೇಶೇ ಋಷ್ಯಶೃಂಗ ನಿವಾಸಕೇ। ಕುಮಾರಪರ್ವತಸ್ಯಾಗ್ರೇ ಕುಮಾರಸ್ವಾಮಿನಃ ಕಥಾಮ್ ॥೧॥ ಯಥಾವದ್ವಿದಿತಾಂ ವಿಪ್ರಾಃ ಶೃಣುಧ್ವಂ ಯೂಯಮಂಜಸಾ । ಶ್ರುತಮಾತ್ರಾದ್ವಿಮುಚ್ಯಂತೇ ಕುಷ್ಟರೋಗಾದ್ಯುಪದ್ರವಾಃ ॥ ೨ ॥ ಕಾರ್ತಿಕೇಯಪ್ರಸಂಗಾಚ್ಚ ಕೃತಕೃತ್ಯಾ ಭವಂತ್ಯಹೋ । ಕುಮಾರ ಧಾರಾಮಾಹಾತ್ಮ್ಯಂ ಕುಮಾರಾಚಲವೈಭವಮ್ ॥ ೩ ॥ ಷಣ್ಮುಖಸ್ಯ ಚ ಚಾರಿತ್ರಂ ಪ್ರವಕ್ಷ್ಯಾಮಿ ಸಮಾಸತಃ । ಗೌರೀ ಮಹೇಶಸಂವಾದಂ ಬ್ರಹ್ಮನಾರದಯೋಸ್ತಥಾ ॥ ೪ ॥ ಸಹಸ್ರಬಿಂದೂಪದಿಷ್ಟಂ ಶತಬಿಂದುಂ ಸುತಂ ಪ್ರತಿ । ಸರ್ವಾನಂದಕರಂ ಪುಣ್ಯಂ ಸರ್ವಸೌಖ್ಯವಿವರ್ಧನಮ್ ॥ ೫ ॥ ಸಹಸ್ರಬಿಂದುಃ ಪೂರ್ವಸ್ಮಿನ್ ಯುಗೇ ತ್ರೇತೇತಿ ಸಂಜ್ಞಿತೇ । ಬಿಂದೋಃ ಪಿತಾ ಸ್ವಸ್ಯ ಪುತ್ರಂ ಸಂಭಾಷ್ಯಾಹ ಮುದಾನ್ವಿತಃ ॥ ೬ ॥ ಶೃಣು ತ್ವಂ ಶ್ರುತಚಾರಿತ್ರಮದ್ಭುತಂ ರೋಮಹರ್ಷಣಮ್ । ಶಿವೇನೋಕ್ತಂ ಯಥಾ ಪುತ್ರ ಬಾಲ್ಯೇನೈವ ಶ್ರುತಂ ಮಯಾ ॥೭॥ ಭೂಧರಃ

**ತಾತ್ಪರ್ಯ:**- ಶ್ರೀ ಸೂತಪುರಾಣಿಕರು ಶೌನಕಾದಿಗಳಿಗೆ ಹೇಳಿದರು— "ಪರಶುರಾಮನ ತಪಃಸ್ಥಳವೂ ಋಷ್ಯಶೃಂಗರ ಆವಾಸಸ್ಥಾನವೂ ಆದ ಕುಮಾರಪರ್ವತದ ಶಿಖರದಲ್ಲಿ ಸುಬ್ರಹ್ಮಣ್ಯಸ್ವಾಮಿಯ ಕಥೆಯನ್ನು ನಾನು ಅರಿತಂತೆ ಹೇಳುವೆನು, ಕೇಳಿರಿ. ಇದನ್ನು ಕೇಳಿದಮಾತ್ರದಿಂದ ಕುಷ್ಠ ರೋಗಾದಿ ಪೀಡೆಗಳು ಪರಿಹಾರವಾಗುತ್ತವೆ. ಷಣ್ಮುಖನ ಮಹಿಮೆಯ ಪ್ರಸ್ತಾವದಿಂದ ಭಕ್ತರು ಧನ್ಯರಾಗುತ್ತಾರೆ. ಕುಮಾರಧಾರಾ, ಕುಮಾರ ಪರ್ವತ ಮತ್ತು ಸುಬ್ರಹ್ಮಣ್ಯದೇವರ ಮಹಿಮೆಯನ್ನು ಸಂಕ್ಷೇಪದಿಂದ ಹೇಳುವೆನು. ಪಾರ್ವತೀ ಪರಮೇಶ್ವರರ ಸಂವಾದರೂಪವಾಗಿಯೂ ಬ್ರಹ್ಮ ನಾರದರ ಸಂವಾದರೂಪವಾಗಿಯೂ ಇರುವ, ಸಹಸ್ರಬಿಂದುವು ತನ್ನ ಪುತ್ರನಾದ ಶತಬಿಂದುವಿಗೆ ಉಪದೇಶಿಸಿದುದೂ ಆದ ಈ ಚರಿತ್ರೆಯು ಸರ್ವರಿಗೂ ಆನಂದಕರವೂ, ಪುಣ್ಯಸಾಧಕವೂ, ಸರ್ವಸೌಖ್ಯಹೇತುವೂ ಆಗಿದೆ. ॥ ೫ ॥ ತ್ರೇತಾಯುಗದಲ್ಲಿ ಸಹಸ್ರಬಿಂದುವು ತನ್ನ ಮಗನಿಗೆ ಹೀಗೆ ಹೇಳಿದನು — ಮಗನೇ, ಬಾಲ್ಯದಲ್ಲಿ ಷಣ್ಮುಖನಿಗೆ ರುದ್ರದೇವರು ಉಪದೇಶಿಸಿದ ಕಥೆಯನ್ನು ಈಗ ನಿನಗೆ ಹೇಳುವೆನು. ಮಹಾಶೇಷನು ಭೂಮಿಯ ಭಾರದಿಂದ

ಶೇಷನಾಮಾಸೌ ಪೃಥ್ವೀಭಾರೇಣ ಪೀಡಿತಃ । ದೇವಂ ಸಂಪ್ರಾರ್ಥ-
ಯಾಮಾಸ ತಸ್ಯ ಪ್ರತ್ಯಕ್ಷತಾಂ ಗತಃ ॥ ೮ ॥ ತಂ ದೃಷ್ಟ್ವಾ ಶ್ರೀ ಹರಿಂ
ಶೇಷಃ ಪ್ರಾರ್ಥಯಾಮಾಸ ತಂ ವಿಭುಮ್ । ಏತಾವತ್ಕಾಲಪರ್ಯಂತಂ
ಕ್ಷ್ಮಾಂ ಧೃತ್ವಾ ಬಾಧಿತೋಽಸ್ಮ್ಯಹಮ್ ॥ ೯ ॥ ಇತಃ ಪರಂ ಧರಣ್ಯಾಂ
ನ್ವೈ ಸಂಚರಿಷ್ಯಾಮಿ ಲೀಲಯಾ । ಇತ್ಥಂ ಶ್ರುತ್ವಾ ಮಹಾವಿಷ್ಣುಸ್ತಥಾ
ತಸ್ಯ ವರಂ ದದೌ ॥ ೧೦ ॥ ಅಹಂ ಕಮಠರೂಪೇಣ ಕ್ಷ್ಮಾಂ ಧೃತ್ವಾ
ರಕ್ಷಯಾಮಿ ತಾಮ್ । ಇತಿ ಶಸ್ಮೈ ವರಂ ದತ್ವಾ ಸಾಕ್ಷಾತ್ಕೈಟ-
ಭಮರ್ದನಃ ॥ ೧೧ ॥ ಕೂರ್ಮರೂಪಂ ಸಮಾಶ್ರಿತ್ಯ ಪಾತಾಲತಲಮ-
ಭ್ಯಗಾತ್ । ತದಾ ಶೇಷಃ ಸಮಾಶ್ರಿತ್ಯ ಭೂಮೌ ಪ್ರಾಕ್ ಪರ್ವತೋ-
ತ್ತಮಮ್ ॥ ೧೨ ॥ ಸುಬ್ರಹ್ಮಣ್ಯೇತಿನಾಮ್ನಾಸೌ ಸ್ಥಿತವಾನ್
ಬಹುವತ್ಸರಮ್ । ತದಾಕಾತ್ಯಾಯಿನೀ ದೇವೀಪುತ್ರಹೀನಾತಿದುಃಖಿತಾ
॥ ೧೩ ॥ ತಪಶ್ಚಕಾರ ಬಹುಧಾ ಹ್ಯನಂತವ್ರತಮಾಚರತ್ । ಅನಂತ-
ವ್ರತಮಹಾತ್ಮ್ಯೈನ್ಮಹಾಶೇಷಃ ಪ್ರತುಷ್ಟಿಮಾನ್ ॥ ೧೪ ॥ ತದಾ
ಪುತ್ರಂ ದದೌ ತಸ್ಯಾಃ ಸ್ವಾವೇಶಂ ಚ ಪ್ರದತ್ತವಾನ್ । ಅಗ್ನಿನಾ

---

ಪೀಡಿತನಾಗಿ ವಿಷ್ಣುವನ್ನು ಪ್ರಾರ್ಥಿಸಲು, ಹರಿಯು ಪ್ರತ್ಯಕ್ಷನಾದನು. ಶೇಷನು ಆ ದೇವನನ್ನು ಕಂಡು ಬೇಡಿದನು — "ಇಷ್ಟರತನಕ ಭೂಮಿಯನ್ನು ಹೊತ್ತು ಬಳಲಿರುವೆನು; ಇನ್ನು ಮುಂದೆ ಸುಖವಾಗಿ ಸಂಚರಿಸಬೇಕೆಂದಿರುವೆನು" ಎಂದು ಬೇಡಲು ಶ್ರೀ ಹರಿಯು ಆ ಮಾತನ್ನು ಕೇಳಿ ಶೇಷನಿಗೆಂದನು: ॥ ೧೦ ॥ "ನಾನು ಕೂರ್ಮರೂಪದಿಂದ ಭೂಮಿಯನ್ನು ಹೊತ್ತು ಕಾಪಾಡುವೆನು" ಎಂದು ವರವನ್ನಿತ್ತು, ಕೂರ್ಮರೂಪವನ್ನು ತಾಳಿ ಪಾತಾಳದ ಅಡಿಗೆ ಹೋದನು. ಆಗ ಶೇಷನು ಭೂಮಿಯಲ್ಲಿ ಪರ್ವತಶ್ರೇಷ್ಠವನ್ನಾಶ್ರಯಿಸಿ, ಸುಬ್ರಹ್ಮಣ್ಯನೆನಿಸಿ ಅನೇಕ ವರ್ಷಗಳಲ್ಲಿ ಇದ್ದನು. ಆಗ ಕಾತ್ಯಾಯಿನೀದೇವಿಯು ಪುತ್ರನಿಲ್ಲವೆಂದು ದುಃಖದಿಂದ ತಪಸ್ಸುಮಾಡುತ್ತ ಅನೇಕ ಸಲ ಅನಂತವ್ರತವನ್ನಾಚರಿಸಿದಳು. ಅದರಿಂದ ಶೇಷದೇವನು ಸಂತುಷ್ಟನಾಗಿ ಆ ದೇವಿಗೆ ಪುತ್ರನನ್ನಿತ್ತು, ಆತನಲ್ಲಿ ತನ್ನ ಆವೇಶವನ್ನು ಕೊಟ್ಟನು. ಹೀಗಿರಲು ಅಗ್ನಿದೇವನು, ಪೂರ್ವದಲ್ಲಿ ರುದ್ರದೇವರ ವೀರ್ಯವನ್ನು ತಾನು ಧರಿಸುವ ವರವನ್ನು ರುದ್ರದೇವರಿಂದ ಪಡೆದಿದ್ದನು. ॥ ೧೫ ॥ ಅದು ಕಾರಣ ಪಾರ್ವತೀ ದೇವಿಗೆ ಆನಂದಕರನಾದ ಆರುಮುಖದವನಾದ ಬಾಲಕನು

ಯೊಾಚಿತಂ ಪೂರ್ವಂ ಶಿವವೀರ್ಯಧರಂ ವರವ್ ||೧೫|| ಷಣ್ಮುಖೋಽ-
ಭೂತ್ತದಾ ದೇವ್ಯಾ ಮನಸ್ಸಂತೋಷಕಾರಕಃ । ಷಣ್ಮುಖಃ ಶಂಕರಂ
ಶಂಭುಂ ಮಾತರಂ ವೇದಿಕಾತ್ಮಜಃ ||೧೬|| ನಮಸ್ಕೃತ್ಯಾಭ್ಯನುಜ್ಞಾತಃ
ಪಶ್ಚಿಮಾಭಿಮುಖೋ ಯಯೌ । ಭೃಗುರಾಮತಪಃ ಕ್ಷೇತ್ರಮೃಷ್ಯ-
ಶೃಂಗಾಶ್ರಮಂ ಪ್ರತಿ || ೧೭ || ತತ್ರ ಸ್ನಾತ್ವಾ ತಪಶ್ಚಕ್ರೇಽನಂತರೂಪಂ
ಚ ಸಂಸ್ಥಿತಮ್ । ಕುಮಾರಪರ್ವತಶ್ಚೇತಿ ವಿಖ್ಯಾತಶ್ಚ ಸ ಭೂಧರಃ
|| ೧೮ || ಕುಮಾರಧಾರಾ ವಿಖ್ಯಾತಾ ಯಸ್ಮಾತ್ತಸ್ಮಾ ಸರಿದುದ್ಗತಾ ।
ಕುಕ್ಕೇಲಿಂಗೇತಿ ವಿಖ್ಯಾತಂ ಯತ್ರೋದ್ಭೂತಂ ಶಿವಾತ್ಮಕಮ್ ||೧೯||
ಏವಂ ನಾಮ ಪರಿಜ್ಞಾತ್ವಾ ಮುಚ್ಯತೇ ಸರ್ವಬಂಧನಾತ್ । ತಸ್ಮಾತ್ಸರ್ವ
ಪ್ರಯತ್ನೇನ ಸುಬ್ರಹ್ಮಣ್ಯಂ ಭಜೇನರಃ ||೨೦ || ಸ್ಕಂದಸ್ತು ತಸ್ಯ
ಕಾಮಾಂಶ್ಚ ದದಾತಿ ಶಿಖಿವಾಹನಃ । ತನ್ನಾಮಸ್ಮರಣಾದೇವ ಸರ್ವ-
ಪಾಪೈಃ ಪ್ರಮುಚ್ಯತೇ||೨೧|| ಋಷಯ ಊಚುಃ-ಕಥಂ ಸೂತ ಮಹಾ
ಭಾಗ ಭೃಗುರಾಮತಪಃಸ್ಥಲಮ್ ಋಷ್ಯಶೃಂಗತಪಃಕ್ಷೇತ್ರಂ ಕಥಂ
ಚಾಸೀದ್ವದಸ್ವ ನಃ || ೨೨ || ಭೂಧರಃ ಕಥಮಾಪ್ನೋತಿ ಭೂಭಾಗೇ
ಸಂಸ್ಥಿತೋ ವದ । ಸುಬ್ರಹ್ಮಣ್ಯೋ ಯತ್ರ ಚಾಸ್ತೇ ತತ್ರ ಕಾರಣ-

---

ಹುಟ್ಟಿದನು. ಆ ಷಣ್ಮುಖನು ಮಾತಾಪಿತೃಗಳಾದ ಪಾರ್ವತೀಪರಮೇಶ್ವರ
ರನ್ನು ವಂದಿಸಿ, ಅವರ ಅಪ್ಪಣೆ ಪಡೆದು, ಪಶ್ಚಿಮಕ್ಕೆ ಹೊರಟು, ಪರಶು
ರಾಮನ ತಪಃಕ್ಷೇತ್ರವೂ ಋಷ್ಯಶೃಂಗರ ಆಶ್ರಮವೂ ಆಗಿರುವ ಸ್ಥಳಕ್ಕೆ
ಬಂದು, ಮಿಂದು, ಶೇಷದೇವನನ್ನು ಕುರಿತು ತಪಸ್ಸು ಮಾಡಿದನು. ಕುಮಾ
ರನು ಆ ಬೆಟ್ಟದಲ್ಲಿ ತಪಸ್ಸು ಮಾಡಿದುದರಿಂದ ಅದು ಕುಮಾರಪರ್ವತವೆಂದು
ಪ್ರಸಿದ್ಧವಾಯಿತು. ಆ ತಪಸ್ಸಿನ ಸ್ಥಳದಿಂದ ಹೊರಟ ನದಿಯು ಕುಮಾರ
ಧಾರೆಯೆಂದು ಪ್ರಖ್ಯಾತವಾಯಿತು. ಆ ಸ್ಥಳದಲ್ಲಿದ್ದ ಶಿವಲಿಂಗವು ಕುಕ್ಕೆ
ಲಿಂಗವೆಂದು ಪ್ರಸಿದ್ಧಿಗೊಂಡಿತು. ಈ ರೀತಿಯಲ್ಲಿ ಆ ಸ್ಥಳದ ನಾಮವನ್ನು
ತಿಳಿದವನ ಸಂಸಾರಬಂಧವು ತೊಲಗುವುದು. ಆದಕಾರಣ ಮನುಷ್ಯನು
ಪ್ರಯತ್ನದಿಂದ ಸುಬ್ರಹ್ಮಣ್ಯದೇವನನ್ನು ಸೇವಿಸತಕ್ಕದು. || ೨೦ || ನವಿ
ಲನ್ನೇರಿದ ಸ್ಕಂದದೇವನು ಭಜಕನ ಸರ್ವಾಭೀಷ್ಟವನ್ನೀಯುವನು. ಆ
ದೇವನ ನಾಮಸ್ಮರಣಮಾತ್ರದಿಂದ ಸರ್ವಪಾಪವೂ ನಷ್ಟವಾಗುವುದು".
ಶೌನಕಾದಿ ಮುನಿಗಳು ಕೇಳಿದರು— "ಮಹಾತ್ಮನೇ! ಪರಶುರಾಮನ ಸ್ಥಳ

ಮುಚ್ಯತಾಮ್ ॥ ೨೩ ॥ ಕುಮಾರಧಾರಿಕಾ ಕಸ್ಮಾಜ್ಜಾತಾ ಕಂ ದೇಶಮಾಗತಾ । ತಸ್ಯಾ ಮಹಾತ್ಮ್ಯಮತುಲಂ ವಿಚಾರ್ಯೈ ವದ ಮೇ ಪ್ರಭೋ ॥ ೨೪ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯ ಕ್ಷೇತ್ರಪುರಾಣೇ
ಪ್ರಥಮೋಽಧ್ಯಾಯಃ ॥ ೧ ॥

---

---

ವಾದ ಆ ಕ್ಷೇತ್ರವು ಋಷ್ಯಶೃಂಗಮುನಿಗಳ ತಪಃಕ್ಷೇತ್ರವು ಹೇಗಾಯಿತು? ಸುಬ್ರಹ್ಮಣ್ಯನು ಕುಮಾರಪರ್ವತಕ್ಕೆ ಹೇಗೆ ಬಂದನು? ಎಲ್ಲಿ ಯಾವ ಕಾರಣ ದಿಂದ ಹೇಗೆ ನಿಂತನು? ಕುಮಾರಧಾರೆಯು ಎಲ್ಲಿಂದ ಹುಟ್ಟಿ ಯಾವ ದೇಶಕ್ಕೆ ಬಂದಿತು? ಈ ಮಹಿಮೆಗಳನ್ನು ಹೇಳು." ॥ ೨೪ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು ॥ ೧ ॥

---

## ಅಥ ದ್ವಿತೀಯೋಽಧ್ಯಾಯಃ

ಶ್ರೀಸೂತ ಉವಾಚ—ಶತಬಿಂದೋಶ್ಚ ಚಾರಿತ್ರಂ ತಥಾ ತಜ್ಜನ
ಕಸ್ಯ ಚ । ಅತ್ಯಾಶ್ಚರ್ಯಕರಂ ಕರ್ಮ ಪ್ರವಕ್ಷ್ಯಾಮಿ ವಿಧಾನತಃ
॥ ೧ ॥ ಸಹಸ್ರಬಿಂದುಃ ಪೂರ್ವಸ್ಮಿನ್ಯುಗೇತ್ರೇತೇತಿಸಂಜ್ಞಿತೇ । ಋಷ್ಯ
ಶೃಂಗಗಿರೇರಗ್ರೇ ತಪಸ್ತೇಪೇಽತಿದುಷ್ಕರಮ್ ॥ ೨ ॥ ಋತೌ ಗ್ರೀಷ್ಮೇ
ರವೌ ದೃಷ್ಟಿಂ ನಿಯಮ್ಯ ಸತು ತಿಷ್ಟತಿ। ವರ್ಷಾಕಾಲೇ ವೃಷ್ಟಿಮಧ್ಯೇ
ಹೇಮಂತೇ ಹಿಮಸನ್ನಿಧೌ ॥ ೩ ॥ ಹಿಮಂ ತತ್ಕಂಠಮಾಲಾಯಾಂ
ಮುಕ್ತಾಮಣಿರಿವಾಭವತ್ । ತದಂಗಾದಪತದ್ಭೂಮೌ ಸರಿದ್ಭೂತ್ವಾ
ಪ್ರಯಾತಿ ಚ ॥ ೪ ॥ ಖ್ಯಾತಾ ಕುಮಾರಧಾರೇತಿ ಯಯೌ ಸೈವ
ಸರಿದ್ವರಾ । ತಸ್ಯ ಪ್ರಸನ್ನೋ ಭಗವಾನ್ ರವಿರ್ಲೋಕೋಪದೀಪಕಃ
॥ ೫ ॥ ಸಪ್ತಾಶ್ವಃ ಸ್ವಾಗತಃ ಸ್ವರ್ಗಾದ್ವಿಬುಧಃ ಪದ್ಮಲೋಚನಃ । ತಂ
ದೃಷ್ಟ್ವಾ ಸ ದ್ವಿಜಃ ಪ್ರಾಹ ಸುತಮೇಕಂ ಪ್ರದೇಹಿ ಮೇ ॥ ೬ ॥
ತಥಾಸ್ತು ತೇ ಸುತಂ ಪಶ್ಯ ನದೀ ರೂಪೇಣ ಸಂಸ್ಥಿತಮ್ । ಪುಣ್ಯ-
ಕ್ಷೇತ್ರನದೀ ಯಾ ಸಾ ಜಲರೂಪೇಣ ನಿರ್ಗತಾ ॥ ೭ ॥ ಭವದ್ಬಿಂದು-

---

ಸೂತರು ಹೇಳಿದರು:— "ಮುನಿಗಳಿರಾ, ಕೇಳಿರಿ. ಶತಬಿಂದುವಿನ
ಮತ್ತು ಆತನ ತಂದೆಯ ಆಶ್ಚರ್ಯಕರವಾದ ಕರ್ಮವನ್ನು ಹೇಳುವೆನು.
ತ್ರೇತಾಯುಗದಲ್ಲಿ ಸಹಸ್ರಬಿಂದುವೆಂಬವನು ಋಷ್ಯಶೃಂಗಪರ್ವತದ ಶಿಖರದಲ್ಲಿ
ಅಸಾಧ್ಯ ತಪಸ್ಸನ್ನು ಮಾಡಿದನು. ಗ್ರೀಷ್ಮಋತುವಿನಲ್ಲಿ ಸೂರ್ಯನಲ್ಲಿ
ಕಣ್ಣನ್ನಿಟ್ಟು ತಪಸ್ಸಿಗೆ ನಿಂತನು. ವರ್ಷರ್ತುವಿನಲ್ಲಿ ಮಳೆಯಲ್ಲಿ ನೆನೆಯುತ್ತ,
ಹೇಮಂತಋತುವಿನಲ್ಲಿ ಹಿಮದ ಮಧ್ಯದಲ್ಲಿ ನಿಂತು ತಪಸ್ಸು ಮಾಡಿದನು.
ಆತನ ಕುತ್ತಿಗೆಯ ಸರದಲ್ಲಿ ಹಿಮವು ಮುತ್ತಿನ ಮಣಿಯಂತೆ ಜೋತಾಡುತ್ತ
ಕೆಳಗೆ ಬಿದ್ದು ನದಿಯಾಗಿ ಹರಿಯಿತು. ಆ ನದಿಯೇ ಕುಮಾರಧಾರೆಯೆನಿ
ಸಿತು. ಆ ಸಹಸ್ರಬಿಂದುವಿಗೆ ಪ್ರಸನ್ನನಾದ ಲೋಕಪ್ರಕಾಶಕನಾದ ॥ ೫ ॥
ಸೂರ್ಯನು ಪ್ರತ್ಯಕ್ಷನಾದನು. ಆ ಮುನಿಯು ಸೂರ್ಯನನ್ನು ಕಂಡು
"ಪುತ್ರನನ್ನು ಕೊಡು"ಎಂದು ಬೇಡಿದನು. ಸೂರ್ಯದೇವನು "ಹಾಗೆಯೇ
ಆಗಲಿ. ನಿನ್ನ ಪುತ್ರನು ನದೀರೂಪದಿಂದಿರುತ್ತಾನೆ, ನೋಡು. ಈ ಕ್ಷೇತ್ರದ
ನದಿಯಾಗಿ ನಿನ್ನ ದೇಹದ ಹಿಮಬಿಂದುವಿನಿಂದ ಹುಟ್ಟಿ ಹರಿದುದರಿಂದ,

ಪ್ರಭೂತತ್ವಾತ್ ಪ್ರತಿಷ್ಠಾಮುಪನೀಯತೇ । ಕಾಲಾಂತರೇ ಹಿ ತೇ ಪುತ್ರೋ ಬುದ್ಧಿಮಾಂಶ್ಚ ಭವಿಷ್ಯತಿ ॥ ೮ ॥ ಶತಬಿಂದು ಸುನಾಮ್ನಾ ಚ ಖ್ಯಾತಿಮಾಂಶ್ಚ ಭವಿಷ್ಯತಿ । ಇತ್ಯುಕ್ತ್ವಾ ರವಿರತ್ರೈವ ವರಂ ದತ್ವಾ ದ್ವಿಜಸ್ಯ ಚ ॥ ೯ ॥ ಪಶ್ಯತಾಮೇವ ಸರ್ವೇಷಾಂ ತತ್ರೈವಾಂತರ್ದಧೇ ಕಿಲ । ಏತತ್ಪ್ರಸಂಗಂ ಶಂಭುಸ್ತು ಪ್ರೋಕ್ತವಾನ್ ಷಣ್ಮುಖಾಯ ವೈ ॥ ೧೦ ॥ ತದಹಂ ತೇ ವದಿಷ್ಯಾಮಿ ಶ್ರುತ್ವಾ ಭಕ್ತಾ ಭವಂತಿ ಹಿ । ಸುತೋऽಸೌ ಶತಬಿಂದುಸ್ತು ಭವಿಷ್ಯತಿ ಯುಗಾಂತರೇ ॥ ೧೧ ॥ ತಪಶ್ಚಕಾರ ಬಹುಶೋ ವಹ್ನೇಃ ಪ್ರಿಯಚಿಕೀರ್ಷಯಾ । ತಸ್ಯೋಗ್ರತಪಸಸ್ತೇಜೋ ಯಾತಿ ಮಾರ್ತಾಂಡಮಂಡಲಮ್ ॥ ೧೨ ॥ ದೇವಾದೀನಾಂ ಚ ಸರ್ವೇಷಾಂ ಸಂಕಟಂ ಸಮಜಾಯತ । ದೇವಾಃ ಪಿತೃಗಣಾಃ ಸಾಧ್ಯಾಃ ಸಿದ್ಧವಿದ್ಯಾಧರಾದಯಃ ॥ ೧೩ ॥ ಪಶವಃ ಪಕ್ಷಿಣಶ್ಚೈವ ನೈತೇ ಯಾಂತೀಹ ವ್ಯೋಮನಿ । ತಂ ದೃಷ್ಟ್ವಾ ಮುನಯಃ ಸರ್ವೇ ವಿಸ್ಮಿತಾಃ ಶಂಸಿತವ್ರತಾಃ ॥ ೧೪ ॥ ಕಶ್ಯಪೋऽತ್ರಿರ್ಭರದ್ವಾಜಶ್ಶತಾನಂದೋऽಥ ಗೌತಮಃ । ತತೋ ವೈಖಾನಸಶ್ಚೈವ ವಾಲಖಿಲ್ಯಾ ಮಹರ್ಷಯಃ

---

ಕುಮಾರಧಾರೆಯೆಂದು ಪ್ರಖ್ಯಾತಳಾದ ಈ ನದಿಯೇ ಒಂದು ರೂಪದಿಂದ ಬುದ್ಧಿಶಾಲಿ ಪುತ್ರನಾಗುವನು. ಅವನು ಆ ಶತಬಿಂದುವೆಂದು ಪ್ರಖ್ಯಾತನಾಗುವನು" ಹೀಗೆಂದು ಸೂರ್ಯನು ಆ ಶತಬಿಂದುವಿಗೆ ವರವನ್ನಿತ್ತು, ಎಲ್ಲರೂ ನೋಡುತ್ತಿರುವಂತೆ ಅಲ್ಲೇ ಅದೃಶ್ಯನಾದನು. ರುದ್ರದೇವರು ಷಣ್ಮುಖನಿಗೆ ಹೇಳಿರುವ ಈ ಚರಿತ್ರೆಯನ್ನು ನಿನಗೆ ಹೇಳುವೆನು. ॥ ೧೦ ॥ ಇದನ್ನು ಕೇಳಿದವರು ಷಣ್ಮುಖನ ಭಕ್ತರಾಗುವರೆಂದು ಸಹಸ್ರಬಿಂದುವು ಮಗನಿಗೆ ಹೇಳಿದುದನ್ನು ಸೂತರು ಹೇಳುತ್ತಾರೆ- ಯುಗಾಂತರದಲ್ಲಿ ಆ ಶತಬಿಂದುವೆಂಬ ಪುತ್ರನು ಹುಟ್ಟಿ ಅಗ್ನಿದೇವರ ಪ್ರೀತಿಯನ್ನು ಗಳಿಸುವ ಅಪೇಕ್ಷೆಯಿಂದ ತಪಸ್ಸು ಮಾಡಿದನು. ಆತನ ಭಯಂಕರ ತಪಸ್ಸಿನ ತೇಜಸ್ಸು ಸೂರ್ಯಮಂಡಲಕ್ಕೆ ಮುಟ್ಟಿತು. ಸಮಸ್ತ ದೇವತೆಗಳಿಗೂ ಸಂಕಟವುಂಟಾಯಿತು. ದೇವತೆಗಳು - ಪಿತೃಗಳು - ಸಿದ್ಧರು - ಸಾಧ್ಯರು - ವಿದ್ಯಾಧರರು, ಪಶುಪಕ್ಷಿಗಳು, ಕೂಡ ಭೂಮಿಯಲ್ಲಾಗಲೀ ಆಕಾಶದಲ್ಲಾಗಲೀ ಸಂಚರಿಸಲಾರದಾದರು. ವ್ರತನಿಷ್ಠರಾದ ಕಶ್ಯಪ-ಅತ್ರಿ-ಭರದ್ವಾಜ - ಶತಾನಂದ-ಗೌತಮ-ವೈಖಾನಸ-ವಾಲಖಿಲ್ಯರೆಂಬ ಮಹರ್ಷಿಗಳು ॥ ೧೫ ॥ ಶತಬಿಂದುವಿರುವಲ್ಲಿಗೆ ಬಂದು

॥ ೧೫ ॥ ಶತಬಿಂದುರ್ಯತ್ರ ಚಾಸ್ತೇ ಸರ್ವೇ ಗತ್ವಾ ತದಂತಿಕಮ್ ।
ತಂ ದೃಷ್ಟ್ವಾ ಮುನಯಃ ಸರ್ವೇ ಪಪ್ರಚ್ಛುಸ್ತಂ ಪೃಥಕ್ ಪೃಥಕ್
॥ ೧೬ ॥ ಕಿಮರ್ಥಂ ತಪ್ಯಸೇ ವಿಪ್ರ ಅತ್ಯುಗ್ರತಪಸಾ ಯುತಃ ।
ಪರೋಪದ್ರವಕೃತ್ಕರ್ಮ ಸಂತಃ ಕುರ್ಯುಃ ಕದಾಪಿನ ॥ ೧೭ ॥
ತಥಾವಿಧಾನಮತುಲಂ ವೈಶ್ವಾನರತಪೋಽಭವತ್ । ತತಸ್ತೇ
ಋಷಯಸ್ಸರ್ವೇ ಜ್ವಾಲಾಗರ್ಭಾಸ್ತದಾಭವನ್ ॥ ೧೮ ॥ ಇತಿ
ತೈರುದಿತಸ್ಸೋಽಪಿ ವಿರರಾಮ ಮುನೀಶ್ವರಃ । ತದಂಗಸ್ವೇದತೋ
ಜಾತಾ ನ್ಯಪತದ್ಭುವಿ ಸರ್ವತಃ ॥ ೧೯ ॥ ಪ್ರವಹತ್ಯತೀವೇಗೇನ ನದೀ
ಭೂತ್ವಾ ತದಾ ಕ್ಷಿತೌ । ಸಹಸ್ರಬಿಂದುನಾ ಜಾತಾ ಜ್ಯೇಷ್ಠಾ ಜಾತಾ
ಕುಲಾಯ ಚ ॥ ೨೦ ॥ ಅನ್ಯಾ ಕನಿಷ್ಠಿಕಾ ನಾಮ್ನಾ ಖ್ಯಾತಿಂ ಯಾತಿ
ಷಡಾನನ। ತತಃ ಪ್ರಸನ್ನೋ ಭಗವಾನ್ ವೀತಿಹೋತ್ರೋ ಮಹಾಮತಿಃ
॥ ೨೧ ॥ ಕಿಮಿಚ್ಛಸಿ ವದ ಬ್ರಹ್ಮನ್ ಶತಬಿಂದೋ ತಪೋಧನ ।
ವೈಶ್ವಾನರೋಕ್ತಂ ವಾಕ್ಯಂ ತಚ್ಛ್ರುತ್ವಾಸೌ ಶತಬಿಂದುಕಃ ॥ ೨೨ ॥
ವರಂ ವಕ್ಷ್ಯೇ ಮಹಾಭಾಗ ಲೋಕೋದ್ಧಾರಣಹೇತವೇ । ಮದಂಗ
ಜಾತಾ ಯಾ ಗಂಗಾ ಖ್ಯಾತಿಂ ಯಾತು ಕಲೌ ಯುಗೇ ॥ ೨೩ ॥

---

ಆತನನ್ನು ಕಂಡು ಎಲ್ಲರೂ ಪ್ರತ್ಯೇಕವಾಗಿ ಕೇಳಿದರು—"ಎಲೈ ಬ್ರಾಹ್ಮಣನೇ! ಅತಿ ಕಠಿಣವಾದ ತಪಸ್ಸಿನಿಂದ ಏಕೆ ಕಷ್ಟಪಡುತ್ತೀ? ಎಂದಿಗಾದರೂ ಸಜ್ಜನರು ಪರರಿಗೆ ಉಪದ್ರವ ಮಾಡುವ ಕಾರ್ಯವನ್ನು ಮಾಡಬಾರದು. ಈ ನಿನ್ನ ತಪಸ್ಸು ಅಂತಹ ಲೋಕೋಪದ್ರವಕರವೇ ಆಗಿರುವುದು." ಹೀಗೆ ಹೇಳುತ್ತಿರುವಾಗ ಆತನ ತಪಸ್ಸಿನ ಜ್ವಾಲೆಯು ಆ ಮುನಿಗಳನ್ನು ಆಕ್ರಮಿಸಿತು. ಶತಬಿಂದುವು ಮುನಿಗಳ ಮಾತಿನಂತೆ ತಪಸ್ಸನ್ನು ನಿಲ್ಲಿಸಿದನು. ಆತನ ದೇಹದ ಬೆವರಿನ ಬಿಂದುವಿನಿಂದುಂಟಾದ ನೀರು ನದಿಯಾಗಿ ಅತಿವೇಗದಿಂದ ಸುತ್ತಲೂ ಹರಿಯಿತು. ಸಹಸ್ರಬಿಂದುವಿನಿಂದ ಹುಟ್ಟಿದ ನದಿಯು ಆ ಕುಲಕ್ಕೇನೇ ಜ್ಯೇಷ್ಠಳಾದಳು. ॥ ೨೦ ॥ ಶತಬಿಂದುವಿನಿಂದ ಹುಟ್ಟಿದ ನದಿಯು ಕನಿಷ್ಠೆಯೆಂದು ಪ್ರಖ್ಯಾತಳಾದಳು. ಎಲೈ ಷಣ್ಮುಖನೆ! ಆ ಮೇಲೆ ಅಗ್ನಿಯು ಪ್ರತ್ಯಕ್ಷನಾಗಿ ಆ ಮುನಿಗೆ ಹೇಳಿದನು—"ಎಲೈ ತಪಸ್ವಿಯೆ! ಯಾವ ವರವನ್ನು ಬಯಸುತ್ತೀ?" ಎಂದು. ಈ ಮಾತನ್ನು ಕೇಳಿ ಶತಬಿಂದುವು—"ಮಹಾತ್ಮನೆ! ನಾನಪೇಕ್ಷಿಸುವ ವರವು ಲೋಕೋದ್ಧಾರಕ್ಕಾಗಿರತಕ್ಕುದು. ನನ್ನ ದೇಹದಿಂದ ಹುಟ್ಟಿದ ಈ ಗಂಗೆಯು ಕಲಿಯುಗದಲ್ಲಿ

ತತ್ತೀರ್ಥಸ್ನಾನಮಾತ್ರೇಣ ಸರ್ವಪಾಪಂ ವ್ಯಪೋಹತು । ಗೋಘ್ನಶ್ಚೈವ ಕೃತಘ್ನಶ್ಚ ಭ್ರೂಣಹಾ ಗುರುತಲ್ಪಗಃ ॥ ೨೪ ॥ ಸ್ತ್ರೀಬಾಲಘಾತಕಶ್ಚೈವ ಸುರಾಪೋ ವೃಷಲೀಪತಿಃ । ಏತಾನ್ಯನ್ಯಾನಿ ಪಾಪಾನಿ ಕೃತ್ವಾ ಮಜ್ಜಂತಿ ತಜ್ಜಲೇ ॥ ೨೫ ॥ ಮುಚ್ಯಂತಾಂ ಸರ್ವಪಾಪೇಭ್ಯ ಇದಂ ದೇಹಿ ವರಂ ಮಮ । ಹೇಮಂತೇ ಮಾರ್ಗಶೀರ್ಷೇ ಚ ಷಷ್ಠ್ಯಾಂ ವೈ ಪುಣ್ಯಯೋಗಕೇ ॥ ೨೬ ॥ ಪಂಚಮ್ಯಾಂ ವಾ ಚತುರ್ಥ್ಯಾಂ ವಾ ಸ್ನಾತ್ವಾ ಕುಷ್ಠಾದ್ವಿಮುಚ್ಯತಾಮ್ । ತಥಾಸ್ತ್ವಿತಿ ವರಂ ದತ್ವಾ ಅಗ್ನಿರಂತರ್ದಧೇ ತದಾ ॥ ೨೭ ॥ ಶತಬಿಂದುಸ್ಸಮುತ್ಥಾಯ ಹ್ಯಸ್ತೌಷೀದ್ವಹ್ನಿಮಗ್ರತಃ । ನಮಸ್ತೇ ಗಾರ್ಹಪತ್ಯಾಯ ನಮಸ್ತೇ ದಕ್ಷಿಣಾಗ್ನಯೇ ॥ ೨೮ ॥ ನಮ ಆಹವನೀಯಾಯ ನಮೋ ಜ್ವಾಲಾತ್ಮನೇ ನಮಃ । ಇತಿ ಸ್ತುತ್ವಾ ತದಾ ವಹ್ನಿಂ ಶತಬಿಂದುರ್ದ್ವಿಜೋತ್ತಮಃ ॥ ೨೯ ॥ ವರಂ ಲಬ್ಧ್ವಾ ತತಸ್ಸೋಽಪಿ ಸುಖಂ ಭುಕ್ತ್ವಾ ದಿವಂಗತಃ । ಸಹಸ್ರಬಿಂದುನಾ ಜಾತಾ ಜ್ಯೇಷ್ಠಾ ಚೇಯಂ ಕನಿಷ್ಠಿಕಾ ॥ ೩೦ ॥ ಕುಮಾರಧಾರಿಕಾ

---

ಪ್ರಖ್ಯಾತವಾಗಲಿ. ಈ ನದೀ ತೀರ್ಥ ಸ್ನಾನಮಾತ್ರದಿಂದ ಸಮಸ್ತ ಪಾಪವೂ ನಾಶವಾಗಲಿ. ಗೋಹತ್ಯ ಮಾಡಿದವನು, ಕೃತಘ್ನನು, ಗರ್ಭಹತ್ಯ ಮಾಡಿದವನು, ಗುರುಪತ್ನೀ ಸಂಸರ್ಗಮಾಡಿದವನು, ಸ್ತ್ರೀ–ಬಾಲಘಾತಕನು, ಕಳ್ಳು ಕುಡಿದವನು, ಶೂದ್ರಸ್ತ್ರೀಸಂಸರ್ಗಮಾಡಿದವನು, ಇವೇ ಮೊದಲಾದ ಪಾಪ ಮಾಡಿದವರು ಈ ನದೀ ಸ್ನಾನದಿಂದ ಸರ್ವಪಾಪವನ್ನು ಕಳೆದುಕೊಳ್ಳಲಿ. ಇಂತಹ ವರವನ್ನು ಕೊಡು. ಹೇಮಂತ ಋತುವಿನ ಮಾರ್ಗಶೀರ್ಷಮಾಸದ ಷಷ್ಠೀತಿಥಿಯ ಪುಣ್ಯಯೋಗದಲ್ಲಾಗಲಿ, ಪಂಚಮಿ ಅಥವಾ ಚತುರ್ಥಿಯಲ್ಲಾಗಲೀ ಈ ನದೀ ಸ್ನಾನ ಮಾಡಿದರೆ ಕುಷ್ಠರೋಗ ಪರಿಹಾರವಾಗಲಿ" ಎಂದು ಪ್ರಾರ್ಥಿಸಲು, ಅಗ್ನಿದೇವನು, "ಹಾಗೆಯೇ ಆಗಲೆ"ಂದು ಅದೃಶ್ಯನಾದನು. ಶತಬಿಂದುವು ಎದ್ದುನಿಂತು ಆ ದೇವನನ್ನು ಸ್ತುತಿಸಿದನು–'ಗಾರ್ಹಪತ್ಯ–ದಕ್ಷಿಣಾಗ್ನಿ–ಆಹವನೀಯ ಎಂಬ ಮೂರು ರೂಪವುಳ್ಳ ಅಗ್ನಿದೇವನೆ! ನಿನಗೆ ನಮಸ್ಕಾರವು. ಜ್ವಾಲಾಸ್ವರೂಪನೆ! ನಿನಗೆ ನಮಸ್ಕಾರವು,' ಎಂದು ಸ್ತುತಿಸಿ ಅಗ್ನಿದೇವನ ಅನುಗ್ರಹದಿಂದ ಇಹಸುಖವನ್ನು ಭೋಗಿಸಿ, ಸ್ವರ್ಗಕ್ಕೆ ತೆರಳಿದನು. ಸಹಸ್ರಬಿಂದುವಿನಿಂದ ಮತ್ತು ಶತಬಿಂದುವಿನಿಂದ ಜೇಷ್ಠೆ-ಕನಿಷ್ಠೆಯಾಗಿ ಹುಟ್ಟಿದ ॥ ೩೦ ॥ ನದಿಯೇ ಕುಮಾರಧಾರೆಯೆಂಬ

ನಾಮ್ನಾ ಪ್ರವಹಿಷ್ಯತಿ ಸರ್ವದಾ । ಷಣ್ಮುಖಸ್ಯಾಗ್ರತೋ ಭಾತಿ ಪಾಪಿನಾಂ ಪಾಪಹಾ ಶುಭಾ ।। ೩೦ ।। ಕುಮಾರಧಾರಾತೀರ್ಥೇಷು ಯಃ ಸ್ನಾಯಾಚ್ಛುದ್ಧಮಾನಸಃ । ಸರ್ವಪಾಪವಿನಿರ್ಮುಕ್ತೋ ಧ್ರುವಂ ಲೋಕಂ ಗಮಿಷ್ಯತಿ ।। ೩೨ ।।

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣೇ
ದ್ವಿತೀಯೋಽಧ್ಯಾಯಃ ।। ೧ ।।

---

ಹೆಸರಿನಿಂದ ಪ್ರಖ್ಯಾತವಾಗಿ ಭೂಮಿಯಲ್ಲಿ ಹರಿಯುವುದು. ಈ ನದಿಯು ಸುಬ್ರಹ್ಮಣ್ಯದೇವರ ಇದಿರಿನಲ್ಲಿ ಪಾಪನಾಶಕವಾಗಿ ಶೋಭಿಸುವುದು. ಕುಮಾರಧಾರೆಯ ಪವಿತ್ರವಾದ ತೀರ್ಥದಲ್ಲಿ ಮಿಂದವನು ಪರಿಶುದ್ಧಮನಸ್ಕನಾಗಿ, ಪಾಪನಿರ್ಮುಕ್ತನಾಗಿ ಶಾಶ್ವತ ಸದ್ಗತಿಯನ್ನು ಹೊಂದುವನು ‖ ೩೨ ‖

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು ‖ ೨ ‖

# ಅಥ ತೃತೀಯೋಽಧ್ಯಾಯಃ

ಋಷಯ ಊಚುಃ—ಋಷ್ಯಶೃಂಗಗಿರೇಶ್ಚಾಪಿ ಕುಮಾರಾದ್ರೇಸ್ತು ಕಾರಣಮ್। ವದಸ್ವ ಶ್ರೋತು ಕಾಮಾನಾಂ ಸೂತ ಪೌರಾಣಿಕೋತ್ತಮ ॥೧॥ ಸೂತ ಉವಾಚ-ಶೃಣುಧ್ವಮೃಷಯೋ ಯೂಯಂ ಸಂಕ್ಷೇಪಾಚ್ಛುಭದಂ ವರಮ್ । ವಕ್ಷ್ಯಾಮಿ ಋಷ್ಯಶೃಂಗಾದ್ರೇಃ ಕುಮಾರಾದ್ರೇಸ್ತು ಕಾರಣಮ್ ॥೨॥ ಪುರಾ ಕೇರಳದೇಶೇ ತು ಕ್ಷಾಮೋಽಭೂತ್ಸರ್ವತೋ ಮಹಾನ್ । ತದಾ ರಾಜಾ ಸಮಾಲೋಚ್ಯ ಸುಬಾಹುರ್ಬಹುಯುಕ್ತಿಮಾನ್ ॥೩॥ ಕೃತಾರ್ಥಬುದ್ಧಿರ್ಯಸ್ಯಾಸ್ತಿ ತತ್ತ್ವಜ್ಞಾನಸಮಾಧಿಷು। ಸರ್ವಜೀವದಯಾಲುತ್ವಂ ನಿತ್ಯನೈಮಿತ್ತಿಕೇ ರತಿಃ ॥ ೪ ॥ ಉಗ್ರೇ ತಪಸಿ ನಿಷ್ಠಾವಾನ್ ಯತ್ರ ತಿಷ್ಠತಿ ತತ್ರ ತು ॥ ಕ್ಷಾಮಡಾಮರಮಾರೀಣಾಂ ಭಯಂ ನಾಸ್ತಿ ಸ ಮೇ ಗತಿಃ ॥ ೫ ॥ ಏತದ್ವಿಭವಸಂಪನ್ನೋ ಯತ್ರ ಕುತ್ರ ಸ್ಥಿತಃ ಸದಾ।ತಂ ಮಾನಯಿತ್ವಾ ಹ್ಯಸ್ಮಿನ್ನೇವ ದೇಶೇ ಸಂಸ್ಥಾಪಯಾಮ್ಯಹಮ್ ॥ ೬ ॥ ಇತಿ ರಾಜಾ ಸಮಾಲೋಚ್ಯ ವಿಪ್ರಾನ್ ಪಪ್ರಚ್ಛ ಭೂಪತಿಃ । ತತ್ರ ತೇಷಾಂ ದ್ವಿಜೇಂದ್ರಾಣಾಂ ಮಧ್ಯೇ ಹ್ಯೇಕೋಽಬ್ರವೀದ್ವಚಃ ॥ ೭ ॥ ಋಷ್ಯ-

---

ಋಷಿಗಳು—"ಋಷ್ಯಶೃಂಗಗಿರಿ ಮತ್ತು ಕುಮಾರ ಪರ್ವತ ಇವುಗಳ ಪ್ರಸಿದ್ಧಿಯ ಕಾರಣವನ್ನು ಹೇಳಿ"ನ್ನಲು ಸೂತನೆಂದನು— " ಋಷಿಗಳಿರಾ! ಸಂಕ್ಷೇಪವಾಗಿ ಋಷ್ಯಶೃಂಗಗಿರಿಯ ಮತ್ತು ಕುಮಾರ ಪರ್ವತದ ಪ್ರಸಿದ್ಧಿಯ ನಿಮಿತ್ತವನ್ನು ಹೇಳುವೆನು. ಪೂರ್ವದಲ್ಲಿ ಕೇರಳ ದೇಶದಲ್ಲಿ ಮಹತ್ತಾದ ಕ್ಷಾಮವು ಹುಟ್ಟಿತು. ಆಗ ಅಲ್ಲಿನ ಸುಬಾಹುವೆಂಬ ರಾಜನು ಹೀಗೆ ಆಲೋಚಿಸಿದನು— ತತ್ವಜ್ಞಾನ ಮತ್ತು ಮನಸ್ಸಿನ ಸ್ಥಿರತ್ವದಲ್ಲಿ ಯಾವನಿಗೆ ನಿಶ್ಚಯಬುದ್ಧಿಯಿದೆಯೋ, ಕಠಿಣವಾದ ತಪಸ್ಸಿನಲ್ಲಿ ಆಸಕ್ತಿಯುಳ್ಳ ಅಂತಹ ಪುರುಷನು ಯಾವಲ್ಲಿರುವನೋ, ಆ ದೇಶದಲ್ಲಿ ಕ್ಷಾಮಪೀಡೆ ಮಾರಿಕೋಪೋದ್ರವಗಳ ಭಯವಿರಲಾರದು. ಆದ ಕಾರಣ ಅಂತಹ ಪುರುಷನೇ ನನಗೆ ಗತಿಯು || ೫ || ಅಂತಹ ವೈಭವಸಂಪನ್ನನು ಎಲ್ಲಿದ್ದರೂ ಆತನನ್ನು ಸನ್ಮಾನಿಸಿ ಕರೆತಂದು ಈ ದೇಶದಲ್ಲಿ ನಿಲ್ಲಿಸುವೆನು. ಹೀಗೆಂದು ಆಲೋಚಿಸಿ ಬ್ರಾಹ್ಮಣರನ್ನು ಕುರಿತು ಕೇಳಲು ಒಬ್ಬಾತನು ಈ ಮಾತನ್ನು

ಶೃಂಗೋ ಮಹಾಯೋಗೀ ಜಿತಸ್ವರ್ಗಃ ಸುನಿಷ್ಠಿತಃ।ತ್ವಯೋಕ್ತಗುಣ- ಸಂಪನ್ನೋ ವರ್ತತೇಽಸ್ಮಿನ್ ಸದಾ ನೃಪ ॥೮॥ ಮಾರ್ಕಂಡೇಯ- ಮಹಾಕ್ಷೇತ್ರೇ ತುಂಗಭದ್ರಾಸಮೀಪತಃ । ಪರ್ವತೇಽದ್ಯ ಮುನಿಶ್ರೇಷ್ಠ ಋಷ್ಯಶೃಂಗೋ ದಯಾನಿಧಿಃ ॥೯॥ ಏತಚ್ಛ್ರುತ್ವಾ ತು ನೃಪತಿರ್ಬ್ರಾ- ಹ್ಮಣೈಸ್ಸಹ ಧರ್ಮವಿತ್ । ಋಷ್ಯಶೃಂಗಾಶ್ರಮಂ ಗತ್ವಾಂ ದೃಷ್ಟ್ವಾ ತಂ ಮುನಿಪುಂಗವಮ್ ॥ ೧೦ ॥ ತುಷ್ಟಾವ ವಿವಿಧೈಃ ಸ್ತೋತ್ರೈಸ್ತಂ ಮುನಿಂ ಶಂಸಿತವ್ರತಮ್ । ನಮಸ್ತೇ ಮುನಿಶಾರ್ದೂಲ ನಮಸ್ತೇ ಮುನಿಸತ್ತಮ ॥ ೧೧ ॥ ಮದ್ದೇಶಸ್ಥಾ ಜನಾಸ್ಸರ್ವೇ ದುರ್ಭಿಕ್ಷೇಣ ಪ್ರಪೀಡಿತಾಃ । ತ್ವಂ ತತ್ರ ಗತ್ವಾ ಮದ್ದೇಶಂ ಪಾಲಯಸ್ವ ಮುನೀಶ್ವರ ॥ ೧೨ ॥ ಮಹಾಪುರುಷ ಕಾರುಣ್ಯಾದ್ದುರ್ಭಿಕ್ಷಭಯನಾಶನಮ್। ಇತ್ಯುದೀರಿತಮಾಕರ್ಣ್ಯ ಋಷ್ಯಶೃಂಗೋ ದಯಾನಿಧಿಃ ॥ ೧೩ ॥ ತಂ ದೇಶಂ ಪ್ರಾಪ್ಯ ಸೌಖ್ಯಾರ್ಥಂ ತತ್ರ ಸ್ಥಿತ್ವಾ ಸ ತಪ್ಯತಿ । ಪೂರ್ವೇ ಶೈಲಸಮೀಪೇ ತು ಕಾಸಾರತಟಗೋ ಮುನಿಃ॥ ೧೪ ॥ ಸಹ್ಯೇ ಚಕ್ರೇ ನಿಜಂ ವಾಸಮನೇಕಯುಗಜೀವಿತಃ । ತಸ್ಮಾದ್ಗಿರಿವರೋ ಹ್ಯೇಷ ಋಷ್ಯಶೃಂಗಾಭಿಧೋಽಭವತ್ ॥೧೫॥ ತತ್ತೀರೇ ಕ್ಷಾಮರೋಗಾದಿ-

---

ಹೇಳಿದನು—"ಋಷ್ಯಶೃಂಗಯೋಗಿಶ್ರೇಷ್ಠನು ನೀನು ಹೇಳಿದ ಗುಣಸಂಪನ್ನ ನಾಗಿ ತುಂಗಭದ್ರಾನದಿಯ ಸಮೀಪದಲ್ಲಿರುವ ಮಾರ್ಕಂಡೇಯ ಮಹಾ ಕ್ಷೇತ್ರದ ಪರ್ವತದಲ್ಲಿರುತ್ತಾನೆ". ಹೀಗೆಂದುದನ್ನು ಕೇಳಿ, ಧರ್ಮಜ್ಞನಾದ ಅರಸನು ಬ್ರಾಹ್ಮಣರೊಡನೆ ಋಷ್ಯಶೃಂಗನ ಆಶ್ರಮಕ್ಕೆ ತೆರಳಿ, ಆ ಮುನಿ ವರನನ್ನು ಕಂಡು, ॥ ೧೦ ॥ ವ್ರತನಿಷ್ಠನಾದ ಆ ಮುನಿಯನ್ನು ಸ್ತುತಿಸಿ ದನು. "ಮುನಿವರನೇ! ನಿನಗೆ ಅನೇಕ ವಂದನೆಗಳು. ನನ್ನ ದೇಶದಲ್ಲಿ ಪ್ರಜೆಗಳೆಲ್ಲರೂ ದುರ್ಭಿಕ್ಷದಿಂದ ಪೀಡಿತರಾಗಿರುತ್ತಾರೆ. ನೀನು ಅಲ್ಲಿಗೆ ಬಂದು ಕರುಣೆಯಿಂದ ದುರ್ಭಿಕ್ಷಭಯವನ್ನು ನಿವಾರಿಸಿ ಕಾಪಾಡು". ಹೀಗೆಂದ ರಾಜನ ಮಾತನ್ನು ಕೇಳಿ, ಆ ದಯಾಳುವು ಆ ದೇಶಕ್ಕೆ ಬಂದು, ಅಲ್ಲಿ ಸೌಖ್ಯ ದೊರೆಯುವುದಕ್ಕಾಗಿ ನಿಂತು ತಪಸ್ಸು ಮಾಡುತ್ತಿರುವನು. ಅಲ್ಲಿ ಪೂರ್ವಭಾಗದಲ್ಲಿರುವ ಸಹ್ಯಪರ್ವತದ ಸರೋವರದ ಬಳಿಯಲ್ಲಿ ನಿಂತು ಅನೇಕ ಯುಗಗಳಲ್ಲಿ ಆ ಮುನಿವರನು ವಾಸಮಾಡುತಿದ್ದನು. ಆದುದ ರಿಂದ ಆ ಪರ್ವತವು ಋಷ್ಯಶೃಂಗ ಪರ್ವತವೆನಿಸಿತು. ॥ ೧೫ ॥ ಆ ಋಷ್ಯ ಶೃಂಗಾಶ್ರಮದ ಬಳಿಯಲ್ಲಿ ಕ್ಷಾಮ-ರೋಗ ಮೊದಲಾದ ಸಮಸ್ತ ದುಃಖ

ಸರ್ವದುಃಖಭಯಂ ನ ಹಿ । ಸಂತಿ ತತ್ಪರಿತಃ ಸರ್ವಾ ಓಷಧ್ಯಃ ಸಾಂಪ್ರತಂ ಸ್ಥಿತಾಃ ॥೧೬॥ ಸರ್ಪವೃಶ್ಚಿಕವೇತಾಲಭೂತಪ್ರೇತಭಯಂ ನ ಹಿ । ತತ್ರತ್ಯಾ ಮನುಜಾಃ ಸರ್ವೇ ನಿರಾಮಯಯುತಾಸ್ಸದಾ ॥ ॥ ೧೭ ॥ ಕೇಶಲಾವಣ್ಯಭೂಯಿಷ್ಠಾಃ ರೂಪೌದಾರ್ಯಗುಣಾನ್ವಿತಾಃ। ಏತದ್ಗಿರೇಶ್ಚ ಮಹಾತ್ಮ್ಯಂ ದೃಷ್ಟ್ವಾ ಷಣ್ಮುಖನಾಮವಾನ್ ॥೧೮॥ ಆಶ್ರಿತ್ಯ ಸಂತೋಷಯುತೋ ಬಹುಕಾಲಮತಂದ್ರಿತಃ। ತತ್ರಾಸೌ ತಪ ಆತಸ್ಥೌ ನೈಷ್ಠಿಕಬ್ರಹ್ಮಚರ್ಯವಾನ್ ॥ ೧೯ ॥ ಜಿತೇಂದ್ರಿಯೋ ಜಿತಪ್ರಾಣಶ್ಚಿಂತಯನ್ ಶಿವಮವ್ಯಯಮ್ । ಅಷ್ಟಾಂಗಯೋಗ-ಮಾಲಂಬ್ಯ ಪಶ್ಚಾದ್ಯೋಗೀ ಬಭೂವ ಸಃ ॥೨೦॥ ಅಣಿಮಾದಿಗುಣೈ-ರ್ಯುಕ್ತೋ ಮಹಾಶೇಷಕಥಾನನಃ । ತಪಸಾಽತೋಷಯದ್ದೇವಂ ಶಂಕರಂ ಲೋಕಶಂಕರಮ್ ॥ ೨೧ ॥ ತೇನ ದತ್ತವರೋ ಭೂತ್ವಾ ಸರ್ವೇಷಾಂ ಪ್ರಾಣಿನಾಂ ಪ್ರಿಯಮ್ । ಕರೋತಿ ಸತತಂ ಪ್ರೀತ್ಯಾ ದ್ವಿಜಾನಾಂ ರಕ್ಷಣಂ ವಿಭುಃ ॥ ೨೨ ॥ ಶೇಷರೂಪೇಣ ಸಂತಿಷ್ಠನ್ ಸರ್ಪರೂಪೇಣ ಸಂಚರನ್ । ಸ ಚ ತತ್ರ ಪ್ರಸನ್ನೋಽಭೂದ್ರುದ್ರೋ ಲೋಕೈಕಸಂಸ್ತುತಃ ॥ ೨೩ ॥ ತವ ದಾಸ್ಯೇ ಗುಹ ಶ್ರೇಷ್ಠಂ ವರಂ

---

ಭಯವೂ ಇರುವುದಿಲ್ಲ. ಅಲ್ಲಿ ಸುತ್ತಲೂ ಸಮಸ್ತ ಔಷಧಿಗಳು ಈಗಲೂ ಇರುತ್ತವೆ. ಸರ್ಪ-ಚೇಳು-ಬೇತಾಲ-ಭೂತ-ಪ್ರೇತಗಳ ಭಯವೂ ಇರುವುದಿಲ್ಲ. ಅಲ್ಲಿರುವ ಮನುಷ್ಯರೆಲ್ಲರೂ ಆರೋಗ್ಯವಂತರಾಗಿ ಸೌಂದರ್ಯ-ಔದಾರ್ಯಾದಿ ಗುಣಭರಿತರಾಗಿರುತ್ತಾರೆ. ಈ ಪರ್ವತದ ಮಹಿಮೆಯನ್ನು ಕಂಡು ಸುಬ್ರಹ್ಮಣ್ಯನು ಇದನ್ನಾಶ್ರಯಿಸಿ, ಸಂತೋಷದಿಂದ ಬಹುಕಾಲದಲ್ಲಿ ನಿಂತು, ಆಲಸ್ಯವಿಲ್ಲದೆ ನೈಷ್ಠಿಕ ಬ್ರಹ್ಮಚರ್ಯವ್ರತವನ್ನು ಕೈಕೊಂಡು, ಜಿತೇಂದ್ರಿಯನಾಗಿ, ಪ್ರಾಣವಾಯುಗಳನ್ನು ವಶಪಡಿಸಿ, ರುದ್ರದೇವರನ್ನು ಧ್ಯಾನಿಸುತ್ತಾ, ಯಮ - ನಿಯಮ-ಆಸನ - ಪ್ರಾಣಾಯಾಮ - ಪ್ರತ್ಯಾಹಾರ-ಧ್ಯಾನ -- ಧಾರಣಾ -- ಸಮಾಧಿಗಳೆಂಬ ಅಷ್ಟಾಂಗಯೋಗಗಳನ್ನಾಶ್ರಯಿಸಿ, ॥ ೨೦ ॥ ಅಣಿಮಾ--ಮಹಿಮಾ--ಲಘಿಮಾ--ಗರಿಮಾ-ಪ್ರಾಪ್ತಿ--ಪ್ರಾಕಾಮ್ಯ-ಈಶಿತ್ವ--ವಶಿತ್ವಗಳೆಂಬ ಅಷ್ಟೈಶ್ವರ್ಯಗಳಿಂದ ಕೂಡಿ, ಮಹಾಶೇಷ ದೇವನ ಕಥೆಯನ್ನುಚ್ಚರಿಸುತ್ತಾ ತಪಸ್ಸಿನಿಂದ ಶಂಕರನನ್ನು ಮೆಚ್ಚಿಸಿದನು. ಪ್ರಸನ್ನನಾದ ಆ ರುದ್ರದೇವನಿಂದ ವರವನ್ನು ಪಡೆದು, ಸರ್ವ ಪ್ರಾಣಿಗಳಿಗೂ ಪ್ರೀತಿಕರನಾಗಿ ನಿತ್ಯದಲ್ಲಿಯೂ ಆ ಸುಬ್ರಹ್ಮಣ್ಯನು ಪ್ರೀತಿಯಿಂದ ಬ್ರಾಹ್ಮಣರನ್ನು ಪೋಷಿಸುತ್ತಿದ್ದಾನೆ. ಲೋಕರಕ್ಷಣೆಗಾಗಿ ಶೇಷರೂಪದಿಂದ ನಿಂತು

ವರಯ ಸುವ್ರತ । ಶ್ರೀಸ್ಕಂದ ಉವಾಚ– ಅನ್ನದಾನಂ ಕರಿಷ್ಯಾಮಿ ಸಾರ್ವಕಾಲಿಕಮತ್ರ ಹಿ ॥ ೨೪ ॥ ಇಮಮೇವ ವರಂ ಮಹ್ಯಂ ದೇವ ದೇಹಿ ಕೃಪಾಕರ । ತಸ್ಮಾತ್ಸರ್ವೇಷು ಕಾಲೇಷು ಅನ್ನದಾನಂ ಕರೋಽಮ್ಯಹಮ್ ॥ ೨೫ ॥ ತಥಾ ತಸ್ಮೈ ವರಂ ದತ್ವಾ ಶಂಕರೋ ಲೋಕಶಂಕರಃ । ಪಶ್ಯತಾಮೇವ ಸರ್ವೇಷಾಂ ತತ್ರೈವಾಂತರ್ದಧೇ ಕಿಲ॥೨೬॥ ತದಾಪ್ರಭೃತಿ ಶೈಲಸ್ತು ಕುಮಾರಸ್ಯ ಸುನಾಮಕಃ । ಖ್ಯಾತಿಮಾನ್ ಸತತಂ ವಿಪ್ರಾಃ ಕುಮಾರಾದ್ರಿರಿತಿ ಶ್ರುತಃ ॥ ೨೭ ॥ ಕುಮಾರಪರ್ವತಸ್ಯಾಸ್ಯ ಪ್ರಭಾವಂ ಚ ಶೃಣೋತಿ ಯಃ। ಸರ್ವಾನ್ ಕಾಮಾನವಾಪ್ನೋತಿ ಕುಮಾರಸ್ಯ ಪ್ರಸಾದತಃ ॥ ೨೮ ॥ ಯೇ ಕೇಚಿದೃಷ್ಯಶೃಂಗಾದ್ರೇಃ ಕುಮಾರಾದ್ರೇಸ್ತು ಕಾರಣಮ್ । ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಸರ್ವಪಾಪಪ್ರಣಾಶನಮ್ ॥ ೨೯ ॥ ಶ್ರಾವಯಂತಿ ಹಿ ಮರ್ತ್ಯಾಸ್ತೇ ಯಾಂತಿ ವಿಷ್ಣೋಃ ಪರಂ ಪದಂ ॥ ೩೦ ॥

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣೇ
ತೃತೀಯೋಽಧ್ಯಾಯಃ ॥ ೧ ॥

---

ಸರ್ಪರೂಪದಿಂದ ಸಂಚರಿಸುತ್ತಾ ಸರ್ವರಿಗೂ ಸುಖವನ್ನೀಯುವನು. ಲೋಕವಂದ್ಯನಾದ ರುದ್ರದೇವನು ಸ್ಕಂದನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ "ಎಲೈ ಸ್ಕಂದನೆ! ವರವನ್ನು ಕೇಳು!" ಎನ್ನಲು ಸ್ಕಂದನೆಂದನು-"ದಯಾಕರನೆ! ಸರ್ವಕಾಲದಲ್ಲಿಯೂ ಈ ಸ್ಥಳದಲ್ಲಿ ಅನ್ನದಾನವನ್ನು ಮಾಡುತ್ತಿರುವಂತೆ ವರವನ್ನು ಕೊಡು" ॥ ೨೫ ॥ ಎಂದು ಪ್ರಾರ್ಥಿಸಲು, ಆತನ ಇಷ್ಟವನ್ನು ಸಲ್ಲಿಸಿ ರುದ್ರನು ಅದೃಶ್ಯನಾದನು. ಆ ಕಾಲ ಮೊದಲ್ಗೊಂಡು ಆ ಸಹ್ಯಪರ್ವತ ಭಾಗವು ಕುಮಾರ ಪರ್ವತವೆಂದು ಪ್ರಸಿದ್ಧಿ ಹೊಂದಿರುತ್ತದೆ. ಎಲೈ ಬ್ರಾಹ್ಮಣರೆ! ಈ ಕುಮಾರ ಪರ್ವತದ ಮಹಿಮೆಯನ್ನು ಕೇಳಿದವನು ಸುಬ್ರಹ್ಮಣ್ಯನ ಅನುಗ್ರಹದಿಂದ ಸಮಸ್ತಾಭೀಷ್ಟಗಳನ್ನು ಪಡೆಯುತ್ತಾನೆ. ಯಾರು ಈ ಋಷ್ಯಶೃಂಗ ಪರ್ವತದ ಮತ್ತು ಕುಮಾರ ಪರ್ವತದ ನಾಮದ ಕಾರಣವನ್ನೂ ಸುಬ್ರಹ್ಮಣ್ಯ ಕ್ಷೇತ್ರದ ಪಾಪವಿನಾಶಕರವಾದ ಮಹಿಮೆಯನ್ನೂ ಉಪದೇಶಿಸುತ್ತಾರೋ, ಆ ಮನುಷ್ಯರು ವೈಕುಂಠ ಸ್ಥಾನವನ್ನು ಪಡೆಯುವರು" ॥ ೩೦ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು ॥ ೩ ॥

---

## ಅಥ ಚತುರ್ಥೋಽಧ್ಯಾಯಃ

ಶ್ರೀಸೂತ ಉವಾಚ–ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಪುನರ್ವಕ್ಷ್ಯಾಮಿ ಭೋದ್ವಿಜಾಃ । ಸುಬ್ರಹ್ಮಣ್ಯೋ ಬ್ರಹ್ಮಗರ್ಭೋ ಬ್ರಾಹ್ಮಣ್ಯಂ ಪಾಲಯತ್ಯಸೌ ॥೧॥ ಕುಷ್ಠಿನಾಂ ರೋಗಿಣಾಮಂಧಬಧಿರಾಣಾಂ ಚ ಮೂರ್ಛತಾಮ್ । ಪಂಗೂನಾಂ ಚೈವ ಮೂಕಾನಾಂ ರೋಗಂ ಪರಿಹರಿಷ್ಯತಿ ॥ ೨ ॥ ಕರೋತಿ ಸತತಂ ಸರ್ವ ಪ್ರಾಣಿನಾಂ ಚ ಪ್ರಿಯಂ ತಥಾ । ಋಷಯ ಊಚುಃ–ಸುಬ್ರಹ್ಮಣ್ಯಸ್ತು ಧರ್ಮಾತ್ಮಾ ಕಸ್ಮಿನ್ ಕಾಲೇ ಸುರೇಶ್ವರಃ ॥ ೩ ॥ ಪ್ರಸನ್ನಃ ಸುಮುಖೋ ಭೂತ್ವಾ ಕಿಂ ಕಿಂ ದಾಸ್ಯತಿ ತದ್ವದ । ಶ್ರೀಸೂತ ಉವಾಚ–ತೌಳವಾಹ್ವಯದೇಶೇ ತು ಬ್ರಾಹ್ಮಣೋ ವೇದಪಾರಗಃ ॥ ೪ ॥ ಕುಷ್ಠವ್ರಣಪರೀತಾಂಗೋ ದುಃಖಿತಃ ಕ್ರೋಧಶೀಲಕಃ । ಬಿಷಗ್ಭಿಃ ಸಾಮಯೋಗೇನ ಚಿಕಿತ್ಸಾಂ ಕಾರಿತೋಽಪಿ ಸಃ ॥೫॥ ಪಂಡಿತೈರ್ವ್ಯರ್ಥ ಸಂಕಲ್ಪೈರ್ಬಹುದುಃಖಾಕುಲೇಂದ್ರಿಯಃ । ಮಾರ್ಗಶೀರ್ಷೇ ತು ಮಾಸ್ಯಾದೌ ಕೇರಳಂ ದೇಶಮಭ್ಯಗಾತ್ ॥೬॥ ತತ್ರಸ್ಥಾಸ್ತು ದ್ವಿಜಾಸ್ಸರ್ವೇ ಕುಮಾರಾಭಿಮುಖಾ ಯಯುಃ । ತಾನ್ ದೃಷ್ಟ್ವಾ ವ್ಯಾಧಿಸಂಪನ್ನೋ ದ್ವಿಜೋ ವೇದ-

---

ಸೂತರು ಹೇಳಿದರು—"ಎಲೈ ಬ್ರಾಹ್ಮಣರಿರಾ! ಮರಳಿ ಸುಬ್ರಹ್ಮಣ್ಯನ ಮಹಿಮೆಯನ್ನು ಹೇಳುವೆನು. ಸುಬ್ರಹ್ಮಣ್ಯನು ಬ್ರಾಹ್ಮಣವರ್ಗವನ್ನು ಕಾಪಾಡುವನು. ಕುಷ್ಠರೋಗವನ್ನೂ ಮತ್ತು ಇತರ ರೋಗವನ್ನೂ, ಮೂರ್ಛೆಗಳಿಗೆ ಒಳಗಾದವರ, ಕುಂಟರ ಮತ್ತು ಮೂಕರ ರೋಗವನ್ನೂ ಪರಿಹರಿಸುವನು. ಸರ್ವಪ್ರಾಣಿಗಳಿಗೆ ಇಷ್ಟವನ್ನುಂಟುಮಾಡುವನು" ಎನ್ನಲು ಮುನಿಗಳೆಂದರು—"ಸೂತನೆ! ಸುಬ್ರಹ್ಮಣ್ಯನು ಯಾವ ಕಾಲದಲ್ಲಿ ಪ್ರಸನ್ನನಾಗಿ ಏನೇನು ಇಷ್ಟವನ್ನು ಕೊಡುವನು?" ಸೂತರೆಂದರು–"ತೌಳವ ಎಂಬ ದೇಶದಲ್ಲಿ ವೇದಜ್ಞನಾದ ಬ್ರಾಹ್ಮಣನು ಕುಷ್ಠದ ಹುಣ್ಣುಗಳಿಂದ ಪೀಡಿತನಾಗಿ ದುಃಖಿತನಾಗಿದ್ದನು. ಕೋಪಿಷ್ಠನಾದ ಆತನಿಗೆ ವೈದ್ಯರು ಸಮಾಧಾನದಿಂದ ಚಿಕಿತ್ಸೆ ಮಾಡಿದರೂ ವ್ಯರ್ಥವಾಗಲು, ॥ ೫ ॥ ದುಃಖಿತನಾಗಿ ಮಾರ್ಗಶೀರ್ಷದ ಆದಿಯಲ್ಲಿ ಕೇರಳ ದೇಶಕ್ಕೆ ಹೋದನು. ಆಗ ಆ ದೇಶದ ಬ್ರಾಹ್ಮಣರೆಲ್ಲರೂ ಸುಬ್ರಹ್ಮಣ್ಯಕ್ಕೆ ಹೊರಟುದನ್ನು ಕಂಡು, ಅವರೊಡನೆ ಎಲ್ಲಿಗೆ ಹೋಗುವಿರೆಂದು ಕೇಳಿದನು. ಅವರು, ಸುಬ್ರಹ್ಮಣ್ಯಕ್ಕೆ

ಪರಾಯಣಾಃ ॥ ೭ ॥ ತಾನ್ ಪಪ್ರುಚ್ಛ ದ್ವಿಜವರಾನ್ ಗಮನಂ ತು ಕ್ವ ಸಾಂಪ್ರತಮ್ । ಇತ್ಯುಕ್ತ್ವಾ ಅವದನ್ ವಿಪ್ರಾಃ ಸುಬ್ರಹ್ಮಣ್ಯಂ ವ್ರಜಾಮ ಭೋಃ ॥೮॥ ಇತಿ ಪ್ರೋಕ್ತೋऽನುಗಚ್ಛಾಮಿ ವದಧ್ವಂ ತತ್ಪ್ರಭಾವಕಮ್ । ಸುಬ್ರಹ್ಮಣ್ಯಸ್ತತ್ರ ಶಿಷ್ಯತ್ಯಾದಿದೇವಃ ಕೃಪಾಕರಃ ॥ ೯ ॥ ಪುತ್ರಹೀನಸ್ಯ ಸಂತಾನಂ ಧನಹೀನಸ್ಯ ವೈ ಧನಮ್ । ಬುದ್ಧಿಹೀನಸ್ಯ ಬುದ್ಧಿಂ ಚ ವ್ಯಾಧಿತಾನಾಂ ನಿರಾಮಯಮ್ ॥ ೧೦ ॥ ಕರೋತಿ ಸತತಂ ಪ್ರೀತ್ಯಾ ಭಜಕಾನಾಂ ಮಹಾಪ್ರಭುಃ । ಯಂ ಯಂ ಕಾಮಯತೇ ಕಾಮಂ ತಂ ತಮಾಪ್ನೋತಿ ಮಾನವಃ ॥ ೧೧ ॥ ತಂ ದೃಷ್ಟ್ವಾ ಯಶ್ಚ ಕಶ್ಚಾಪಿ ನಮಸ್ಕೃತ್ಯ ಪ್ರದಕ್ಷಿಣಮ್ । ಕರೋತಿ ಭಕ್ತಿಸಂಯುಕ್ತಃ ಕೃತಕೃತ್ಯೋಭವಿಷ್ಯತಿ ॥೧೨॥ ವೇದಪಾರಾಯಣಂ ಕೃತ್ವಾ ತದಗ್ರೇ ಭಕ್ತಿಸಂಯುತಃ । ದಿವ್ಯಜ್ಞಾನಮವಾಪ್ಯಾಥ ಋಷೀಣಾಮಗ್ರಣೀರ್ಭವೇತ್ ॥ ೧೩ ॥ ಫಲಪುಷ್ಪಾಣಿ ಧಾನ್ಯಾನಿ ದರ್ಪಣಂ ಸರ್ಷಪಂ ತಥಾ । ಘಂಟಾದಿನಾದಾನ್ ವಿವಿಧಾನ್ ದ್ರವ್ಯಾಣೀತ್ಥಂ ತದಗ್ರತಃ ॥ ೧೪ ॥ ಆದಾಯ ತಸ್ಮೈಯೋದದ್ಯಾತ್ತತ್ಕಾಮಂದಾಸ್ಯತಿ ಧ್ರುವಮ್ । ಸಂರಕ್ಷಣಂ ಕರೋತ್ಯೇವ ದರ್ಶನಾರ್ಥಂ ವ್ರಜಂತಿ ಯೇ ॥ ೧೫ ॥ ಯಃ ಸ್ನಾತಃ ಪ್ರಾತರುತ್ಥಾಯ ಕರತಾಳೈಶ್ಚ ಸಂಯುತಃ ।

---

ಹೋಗುವೆವೆನ್ನಲು, ಆತನು ಅಲ್ಲಿನ ಮಹಿಮೆಯನ್ನು ಹೇಳಬೇಕೆಂದು ಪ್ರಾರ್ಥಿಸಿದನು. ಆಗ ಬ್ರಾಹ್ಮಣರು:—"ಆ ಕ್ಷೇತ್ರದಲ್ಲಿ ದಯಾಳುವಾದ ಸುಬ್ರಹ್ಮಣ್ಯ ದೇವನಿರುವನು. ॥ ೧೦ ॥ ಅಪುತ್ರನಿಗೆ ಸಂತಾನವನ್ನೂ, ದರಿದ್ರನಿಗೆ ಸಂಪತ್ತನ್ನೂ, ಮೂಢನಿಗೆ ಬುದ್ಧಿಯನ್ನೂ, ರೋಗಿಗಳಿಗೆ ಆರೋಗ್ಯವನ್ನೂ ಕೊಡುತ್ತ, ಆ ಮಹಾಪ್ರಭುವು ಭಜಕರ ಇಷ್ಟಾರ್ಥವನ್ನೆಲ್ಲ ಈಯುವನು. ಆ ದೇವನನ್ನು ಕಂಡು ನಮಸ್ಕರಿಸಿ ಭಕ್ತಿಯಿಂದ ಪ್ರದಕ್ಷಿಣೆ ಮಾಡುವವನು ಕೃತಕೃತ್ಯನಾಗುವನು. ಭಕ್ತಿಯಿಂದ ಆ ದೇವನಿದಿರಲ್ಲಿ ವೇದ ಪಾರಾಯಣ ಮಾಡಿದವನು ದಿವ್ಯಜ್ಞಾನವನ್ನು ಹೊಂದಿ ಋಷಿಶ್ರೇಷ್ಠನಾಗುವನು. ಫಲ-ಪುಷ್ಪ-ಧಾನ್ಯ-ಕನ್ನಡಿ-ಸಾಸಿವೆ ಮುಂತಾದ ವಸ್ತುಗಳನ್ನು ಸಮರ್ಪಿಸಿ, ಘಂಟೆ ಮೊದಲಾದ ಶಬ್ದಗಳನ್ನು ಮಾಡಿದರೆ ॥ ೧೫ ॥ ಆತನ ಇಷ್ಟವನ್ನು ಕೊಡುವನು. ಆತನ ದರ್ಶನಕ್ಕೆ ಹೊರಟವರನ್ನು ಕಾಪಾಡುವನು. ಮುಂಜಾನೆ ಎದ್ದು ಮಿಂದು ಕೈಚಪ್ಪಾಳೆ ಬಡೆಯುತ್ತಾ ಆ ದೇವರಿಗೆ

ಪ್ರದಕ್ಷಿಣತ್ರಯಂ ಕೃತ್ವಾ ನಮಸ್ಕಾರಂ ತದಗ್ರತಃ ॥ ೧೬ ॥ ಯಃ ಕರೋತಿ ಸದಾ ಭಕ್ತ್ಯಾ ಸಂಸಾರಾನ್ಮುಚ್ಯತೇ ಹಿ ಸಃ । ಇತ್ಯುಕ್ತಸ್ಸತು ಪಪ್ರಚ್ಛ ವಿಪ್ರಃ ಕೌತೂಹಲಾನ್ವಿತಃ ॥ ೧೭ ॥ ಏತತ್ಸಾಮರ್ಥ್ಯವಾನ್ ದೇವೋ ವದಧ್ವಂ ಕುತ್ರ ತಿಷ್ಠತಿ । ತಂ ದೃಷ್ಟ್ವಾಹಂ ಭಜಿಷ್ಯಾಮಿ ಮಮ ಪಾಪೌಘಶಾಂತಯೇ ॥೧೮॥ ಇತಿ ಪೃಷ್ಟಾಃ ಸಮೂಚುಸ್ತೇ ತೌಲವಾಹ್ವಯದೇಶಜಾಃ । ಕುಮಾರಾಖ್ಯಸ್ಯ ತು ಗಿರೇಃ ಪಶ್ಚಿಮೇ ನಿಕಟೇ ಸದಾ ॥೧೯॥ ಸಕಲಾಭೀಷ್ಟದಾಯೀ ತು ಸುಬ್ರಹ್ಮಣ್ಯಃ ಸ್ಥಿರಃ ಸದಾ । ತದಗ್ರೇ ತು ನದೀ ತಿಷ್ಠತ್ಯತಿಶುದ್ಧಸ್ವರೂಪಿಣೀ ॥ ೨೦ ॥ ಖ್ಯಾತಾ ಕುಮಾರಧಾರೇತಿ ಪಾಪಿನಾಂ ಪಾಪಹಾ ಶುಭಾ । ತೀರ್ಥಂ ಚ ದರ್ಪಣಾಖ್ಯಂ ತು ಮಯೂರಾರೋಹಣೋ ವಟುಃ ॥ ೨೧ ॥ ಕುಕ್ಕೇಲಿಂಗಾಭಿಧಃ ಶಂಭುರ್ವೈದಿಕೇಶು ಕೃಪೀ ಸದಾ । ಏತಚ್ಛ್ರುತ್ವಾ ದ್ವಿಜಃ ಪ್ರಾಹ ದೇವಂ ಪಶ್ಯಾಮಿ ಸಂಪ್ರತಿ ॥೨೨॥ ಯುಷ್ಮಾಭಿಸ್ಸಹಿತೋ ಗತ್ವಾ ತಂ ದೃಷ್ಟ್ವೇಷ್ಟಂ ಲಭಾಮ್ಯಹಮ್ । ಇತಿ ಪ್ರೋಚ್ಯ ಸಮಾಯಾತಃ ಕ್ಷೇತ್ರಂ ತಚ್ಚ ದ್ವಿಜೋತ್ತಮೈಃ ॥ ೨೩ ॥ ದೃಷ್ಟ್ವಾ ನತ್ವಾ ಚ ದೇವೇಶಂ ಕೃತಾಂಜಲಿರಭಾಷತ । ನಮಸ್ತೇ ದೇವದೇವೇಶ ನಮಸ್ತೇ ಧರಣೀಧರ ॥ ೨೪ ॥ ನಮಸ್ತೇ ಗಿರಿಜಾಪುತ್ರ ನಮಸ್ತೇ ಬ್ರಹ್ಮಸಂಭವ । ಇತಿ ಸ್ತುತ್ವಾಪ್ರಾರ್ಥಯಚ್ಚ ಮದ್ರೋಗಂ ನಾಶಯ

---

ಮೂರು ಪ್ರದಕ್ಷಿಣೆ ಮಾಡಿದವನು ಸಂಸಾರದಿಂದ ಮುಕ್ತನಾಗುವನು" ಎಂದು ಬ್ರಾಹ್ಮಣರು ಹೇಳಲು, ಆ ಕುಷ್ಠಿಯು—"ಎಲೈ ಬ್ರಾಹ್ಮಣರೆ! ಇಂತಹ ಮಹಾಪ್ರಭುವು ಎಲ್ಲಿರುವನು? ಹೇಳಿರಿ. ನನ್ನ ಪಾಪ ಪರಿಹಾರಕ್ಕೆ ಆತನನ್ನು ಸೇವಿಸುವೆನು" ಎಂದು ಬೇಡಲು, ಆ ಬ್ರಾಹ್ಮಣರು, "ಕುಮಾರ ಪರ್ವತದ ಪಶ್ಚಿಮ ತೀರದಲ್ಲಿ || ೨೦ || ಸರ್ವಾಭೀಷ್ಟವನ್ನೀಯುವ ಆ ಸುಬ್ರಹ್ಮಣ್ಯನಿರುವನು. ಆತನಿದಿರಲ್ಲಿ ಕುಮಾರಧಾರೆಯೆಂಬ ಪುಣ್ಯ ನದಿಯಿರುವುದು. ಮತ್ತು ದರ್ಪಣತೀರ್ಥವೆಂಬ ತೀರ್ಥವಿರುವುದು. ಆ ದೇವನು ನವಿಲನ್ನೇರಿಕೊಂಡಿರುವನು. ಕುಕ್ಕೆ ಎಂಬ ಆ ಗ್ರಾಮದ ದೇವತೆಯಾದ ಲಿಂಗಸ್ವರೂಪಿ ಸದಾಶಿವನು ವೇದಜ್ಞರಲ್ಲಿ ದಯಾಳುವಾಗಿರುತ್ತಾನೆ" ಎನ್ನಲು, ಆ ರೋಗಿಯು—"ಆ ದೇವನನ್ನು ನಾನು ನೋಡಬೇಕೆಂದಿರುವೆನು. ನಿಮ್ಮೊಡನೆ ಬಂದು ಆ ದೇವನ ದರ್ಶನದಿಂದ ಇಷ್ಟವನ್ನು ಹೊಂದುವೆನು." ಹೀಗೆಂದು ಅವರೊಡನೆ ಆ ಕ್ಷೇತ್ರಕ್ಕೆ ಬಂದು, ದೇವರ ದರ್ಶನ ಮಾಡಿ, ವಂದಿಸಿ, ಕೈಮುಗಿದು ಹೇಳಿದನು—"ದೇವಶ್ರೇಷ್ಠನೇ! ನಮಸ್ಕಾರ. ಶೇಷ

ಪ್ರಭೋ ॥ ೨೫ ॥ ಇತಿ ಸಂಪ್ರಾರ್ಥ್ಯ ದೇವೇಶಂ ಕೃತಾಂಜಲಿ ಪುಟೋ ದ್ವಿಜಃ । ಮದ್ರೋಗಂ ನಾಶಯಸಿ ಚೇತ್ಸಮ್ಯಕ್ ಪೂಜಾಂ ಕರೋಮ್ಯಹಮ್ ॥ ೨೬ ॥ ಅಂಗಪ್ರದಕ್ಷಿಣಂ ಕೃತ್ವಾ ನಮಸ್ಕೃತ್ಯ ಪುನಃ ಪುನಃ । ಸಮ್ಯಕ್ ಸ್ತೋತ್ರಂ ನಮಶ್ಚಕ್ರೇ ಪುನರೇವ ದ್ವಿಜೋತ್ತಮ ॥ ೨೭ ॥ ಸ್ತೋತ್ರಾಂತೇಽ ಪ್ರಾರ್ಥಯದ್ದೇವಂ ಬ್ರಹ್ಮಗರ್ಭಂ ಶಿವಾತ್ಮಜಂ । ನತೋಽಸ್ಮ್ಯಹಂತೇಽಖಿಲದೇವದೇವನಾನಾವಿಧವ್ಯಾಧಿವಿನಾಶನಾಯ। ನಮಾಮಿ ನಿತ್ಯಂ ನಿರುಪದ್ರವಾಯ ನಿರ್ಯಾತಮಾಯಾಯ ಸುಕಾಮದಾಯ ॥ ೨೮ ॥ ಭೃತ್ಯಾರ್ತಿಹಂತ್ರೇ ಭವತಾಪಹರ್ತ್ರೇ ಹ್ಯಜ್ಞಾನನಾಶಾಯ ನಮೋಽಸ್ತುನಿತ್ಯಮ್ । ನಾನಾತ್ಮನೇ ಸಾಯಕಶಕ್ತಿಧಾರಿಣೇ ಭೂತಾಧಿನಾಥಾಯ ನಮೋ ನಮಸ್ತೇ॥೨೯॥ ನಮಸ್ತೇ ಬ್ರಹ್ಮರೂಪಾಯ ನಮಸ್ತೇ ಬ್ರಾಹ್ಮಣಪ್ರಿಯ । ಬ್ರಹ್ಮಗರ್ಭ ನಮಸ್ತೇಽಸ್ತು ನಮಸ್ತೇ ಬ್ರಹ್ಮಮೂರ್ತಯೇ ॥೩೦॥ ಇತಿ ಸ್ತುತೋ ಮಹಾಸೇನೋ ವರಂ ತಸ್ಯ ಪ್ರದತ್ತವಾನ್ । ಶ್ರೀಸ್ಕಂದ ಉವಾಚ— ಭೋವಿಪ್ರ ಶೃಣು ಮದ್ವಾಕ್ಯಂ ವರಂ ವರಯ ಸುವ್ರತ ॥ ೩೧ ॥ ತವೇಪ್ಸಿತವರಂ ಧಾಸ್ಯೇ ಆವಾಸಂ ಚ ಕುರುಷ್ವಭೋಃ । ವರ್ಷಾಂತ-

---

ಸ್ವರೂಪನೆ! ವಂದನೆ, ॥ ೨೫ ॥ ಪಾರ್ವತೀಪುತ್ರನೆ! ಬ್ರಹ್ಮನೆನಿಸಿದ ರುದ್ರದೇವರಿಂದ ಜನ್ಮವೆತ್ತಿದ ದೇವನೆ! ವಂದನೆ. ನನ್ನ ರೋಗವನ್ನು ಪರಿಹರಿಸಿದೆಯಾದರೆ ಭಕ್ತಿಯಿಂದ ಪೂಜಿಸುವೆನು" ಎಂದು ಪ್ರಾರ್ಥಿಸಿ, ಅಂಗಪ್ರದಕ್ಷಿಣೆ ಮಾಡಿ ಮರಳಿ ಮರಳಿ ವಂದಿಸಿ, ಸ್ತುತಿಸಿ, ಮರಳಿ ವಂದಿಸಿ, ಪ್ರಾರ್ಥಿಸಿದನು– "ನಾನಾ ರೋಗ ನಾಶಕರನಾದ ಮಾಯಾತೀತನಾದ ದೇವಶ್ರೇಷ್ಠನೇ! ಸೇವಕರ ದುಃಖವನ್ನು ನಿವಾರಿಸುವ ನಿನಗೆ ವಂದನೆಯು. ಅನೇಕಸ್ವರೂಪನಾದ, ಬಾಣಶಕ್ತಿಗಳನ್ನು ಧರಿಸಿದ, ಭೂತಾಧಿಪತಿಯಾದ ದೇವಶ್ರೇಷ್ಠನೆ, ನಮಸ್ಕಾರವು" ॥ ೩೧ ॥ ಹೀಗೆ ಸ್ತುತಿಸಿದ ಆ ಬ್ರಾಹ್ಮಣನಿಗೆ ವರವನ್ನೀಯಲು ಪ್ರತ್ಯಕ್ಷನಾದ ಸ್ಕಂದನು ಹೇಳಿದನು – "ಎಲೈ ವ್ರತನಿಷ್ಠನಾದ ಬ್ರಾಹ್ಮಣನೆ! ನಿನ್ನ ಇಷ್ಟವರವನ್ನು ಕೇಳು. ಇಲ್ಲಿಯೇ ಆವಾಸಮಾಡು. ಒಂದು ವರ್ಷಾನಂತರ ನಿನ್ನ ದೇಹದ ರೋಗವನ್ನು ಪರಿಹರಿಸುವೆನು. ಅಷ್ಟರ ತನಕ ನನ್ನ ಸೇವೆ ಮಾಡು" ಎಂದು ಅಪ್ಪಣೆ ಕೊಡಲು, ಆ ಬ್ರಾಹ್ಮಣನು ಆಲಸ್ಯವಿಲ್ಲದೆ ಹಾಗೆಯೇ ಒಂದು ವರ್ಷ ತನಕ ಸೇವಿಸುತ್ತಾ ಕೈಮುಗಿದು – "ದೇವನೆ! ನಿನ್ನ ದರ್ಶನಮಾತ್ರದಿಂದಲೂ, ನಿನ್ನ ಕಥೆಯನ್ನು ಕೇಳಿದುದರಿಂದಲೂ,

ರೇऽಹಂ ತ್ವದ್ದೇಹಸ್ಥಿತರೋಗಂ ವಿನಾಶಯೇ ॥೩೨॥ ತಾವತ್ತ್ವಂ ಮಮ ಸೇವಾಂ ಚ ಕುರುಷ್ವ ದ್ವಿಜಸತ್ತಮ । ಇತ್ಯುಕ್ತಂ ಸತತಂ ಚಕ್ರೇ ವರ್ಷಮೇವಮತಂದ್ರಿತಃ ॥ ೩೩ ॥ ಕೃತಾಂಜಲಿಪುಟೋ ಭೂತ್ವಾ ವಾಕ್ಯ ಮೇತದುವಾಚ ಹ । ತವ ದರ್ಶನಮಾತ್ರೇಣ ತ್ವತ್ಕಥಾಶ್ರವಣಾದಪಿ ॥ ೩೪ ॥ ತ್ವನ್ನೈವೇದ್ಯಪ್ರಸಾದಾಚ್ಚ ತ್ವತ್ತೀರ್ಥಸ್ಯ ಚ ಸೇವನಾತ್ । ತ್ವದ್ಗುಣಶ್ರವಣಾತ್ತ್ವ ಪ್ತಿಸ್ತವನಿರ್ಮಾಲ್ಯಧಾರಣಾತ್ ॥ ೩೫ ॥ ಸರ್ವಪಾಪಾನಿ ನಶ್ಯಂತಿ ಜನ್ಮಜನ್ಮಾಂತರೇಷು ಚ। ತಸ್ಮಾತ್ಸರ್ವಾಣಿ ಪಾಪಾನಿ ನಷ್ಟಾನಿ ತವ ಶಾಸನಾತ್ ॥ ೩೬ ॥ ಇತ್ಯುಕ್ತ್ವಾ ವಿಪ್ರವರ್ಯೋऽಪಿ ದೇವದೇವಸ್ಯ ಚಾಗ್ರತಃ । ಸ್ಥಿತೋ ನಿತ್ಯಂ ಸೇವಮಾನೋ ದಿವ್ಯ ದೇಹೋऽಭವತ್ತದಾ ॥ ೩೭ ॥ ಬ್ರಾಹ್ಮಣೈಸ್ಸಹ ಧರ್ಮಾತ್ಮಾ ಪಿತ್ರೋಃ ಸನ್ನಿಧಿಮಾಯಯೌ । ತಮಾನರ್ಚುಶ್ಚ ತತ್ರಸ್ಥಾ ಜನಾಸ್ಸರ್ವೇಹ್ಯನಿಂದಿತಮ್ ॥ ೩೮ ॥

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣೇ
ಚತುರ್ಥೋऽಧ್ಯಾಯಃ ॥ ೪ ॥

---

॥ ೩೩ ॥ ನಿನ್ನ ನೈವೇದ್ಯವನ್ನು ಸ್ವೀಕರಿಸುವುದರಿಂದಲೂ, ನಿನ್ನ ತೀರ್ಥ ಸೇವನೆಯಿಂದಲೂ, ನಿನ್ನ ಗುಣಗಳನ್ನು ಕೇಳುವುದರಿಂದಲೂ, ನಿನ್ನ ನಿರ್ಮಾಲ್ಯ ಪ್ರಸಾದವನ್ನು ಧರಿಸುವುದರಿಂದಲೂ, ಜನ್ಮಜನ್ಮಾಂತರದ ಪಾಪಗಳೆಲ್ಲ ಪರಿಹಾರ ಹೊಂದುವುವು" ಹೀಗೆಂದು ನಿತ್ಯದಲ್ಲಿಯೂ ದೇವರ ಇದಿರಲ್ಲಿ ಪ್ರಾರ್ಥಿಸುತ್ತಾ ಸೇವಿಸುತ್ತಾ ಆ ರೋಗವನ್ನು ಕಳೆದುಕೊಂಡು ದಿವ್ಯದೇಹವನ್ನು ಧರಿಸಿ, ಆ ಬ್ರಾಹ್ಮಣರೊಡನೆ ತನ್ನ ಮಾತಾಪಿತೃಗಳ ಬಳಿಗೆ ಬಂದನು. ಹೀಗೆ ರೋಗ ಪರಿಹರಿಸಿಕೊಂಡು ಬಂದ ಬ್ರಾಹ್ಮಣನನ್ನು ಕಂಡು ಆತನ ದೇಶದ ಜನರೆಲ್ಲರೂ ಸನ್ಮಾನಿಸಿದರು" ॥ ೩೮ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು ॥ ೪ ॥

## ಅಥ ಪಂಚಮೋಽಧ್ಯಾಯಃ

ಶ್ರೀ ಸೂತ ಉವಾಚ– ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಶ್ರುತ್ವಾತೇ ಬ್ರಾಹ್ಮಣೋತ್ತಮಾಃ। ಸರ್ವೇ ಮಿಲಿತ್ವಾ ಸಂಪ್ರಾಹುಃ ಸ್ವಕಂ ಪಾಪಂ ಜಿಹೀರ್ಷವಃ ॥ ೧ ॥ ತತ್ತ್ವಸಾರವಿಚಾರಜ್ಞಾ ಶ್ಚಾತುರ್ವರ್ಣ್ಯಾರ್ಥ-ವೇದಿನಃ। ಗಾಯಂತಶ್ಚ ಹಸಂತಶ್ಚ ಪ್ರಹೃಷ್ಯಂತಃ ಪ್ರಯಾಂತಿ ಚ ॥೨॥ ಕುಮಾರಂ ಪರ್ವತಂ ಪ್ರೀತ್ಯಾ ಪಶ್ಯಂತಿ ಸ್ಮಮಹೋನ್ನತಮ್ । ಸೂಕ್ಷ್ಮಂ ಸರ್ಪಾಕೃತಿಂ ನತ್ವಾ ಜನಾಃ ಪಶ್ಯಂತಿ ತಂ ಪ್ರಭುಮ್ ॥೩॥ ಪ್ರದಕ್ಷಿಣಂ ದ್ವಿಜಾಃ ಕೃತ್ವಾ ವಸಂತಿ ಸ್ಮ ದಿವಾನಿಶಮ್। ತಾನಾಗತಾನ್ ಸಮಾಲೋಕ್ಯ ಸುಬ್ರಹ್ಮಣ್ಯೋ ದಯಾನಿಧಿಃ ॥ ೪ ॥ ಯಥೇಷ್ಟಮನ್ನ-ದಾನೇನ ಪೋಷಯಾಮಾಸ ನಿತ್ಯಶಃ । ತದಾ ತದರ್ಚಕಃ ಸ್ಕಂದಂ ಪ್ರತ್ಯಾಹ ವಿನಯಾನ್ವಿತಃ ॥ ೫ ॥ ಸ್ವಾಮಿನಂ ಪ್ರತಿ ವಿಜ್ಞಾಪ್ಯಂ ಸ್ವರ್ಚಿತಂಭಕ್ತಿಭಾವತಃ । ಸ್ವಾಮಿನ್ನಿಯಂತೋಹಿ ಜನಾ ಆಯಾಸ್ಯಂತಿ ತವಾಲಯಂ ॥ ೬ ॥ ಕಥಂ ತೇಷಾಂ ಕಿಯತ್ಪಾಕಂ ಕರವಾಮ ನ ವಿದ್ಮಹೇ । ಇತಿ ಸಂಪ್ರಾರ್ಥ್ಯ ದೇವೇಶಂ ಶಂಖಘಂಟಾದಿನಿಸ್ವನೈಃ ॥೭॥ ಸಹಿತಸ್ತಾಲವಾದ್ಯೈಶ್ಚ ಪೂಜಯಾಮಾಸ ಚಾರ್ಚಕಃ । ತಚ್ಛ್ರುತ್ವಾ

---

ಸೂತರೆಂದರು—"ಸುಬ್ರಹ್ಮಣ್ಯನ ಮಹಿಮೆಯನ್ನು ಆ ತೌಳವ ದೇಶದ ಬ್ರಾಹ್ಮಣರೆಲ್ಲರೂ ನೆರೆದು ಕೇಳಿ, ತತ್ತ್ವಸಾರವನ್ನು ಅರಿತವರಾದುದರಿಂದ, ಹಾಡುತ್ತ, ನಗುತ್ತ, ಆನಂದಪಡುತ್ತ ತಮ್ಮ ಪಾಪವನ್ನು ಕಳೆಯಲು ಬಯಸಿ ಹೊರಟು, ಕುಮಾರಪರ್ವತವನ್ನು ಕಂಡು, ಸರ್ಪಾಕಾರದಿಂದಿರುವ ಆ ದೇವ ನನ್ನು ಕಂಡು, ವಂದಿಸಿ, ಪ್ರದಕ್ಷಿಣೆ ಮಾಡುತ್ತ ಹಗಲುರಾತ್ರಿಯಲ್ಲಿ ಆವಾಸ ಮಾಡಿದರು. ಷಣ್ಮುಖನು ದಯೆಯಿಂದ ಯಥೇಷ್ಟ ಅನ್ನದಾನ ಮಾಡಿ ಬಂದಿರುವ ಅ ಬ್ರಾಹ್ಮಣರನ್ನು ನಿತ್ಯದಲ್ಲಿಯೂ ರಕ್ಷಿಸುತ್ತಿದ್ದನು. ಆಗ ಆ ಸುಬ್ರಹ್ಮಣ್ಯನ ಅರ್ಚಕನು ವಿನಯದಿಂದ ಬಿನ್ನವಿಸಿದನು. ॥ ೫ ॥ "ದೇವನೆ! ಸ್ವಾಮಿಯಲ್ಲಿ ಬಿನ್ನವಿಸಲಿರುವುದು. ಪ್ರಭುವೆ! ನಿನ್ನ ಈ ಮಂದಿ ರಕ್ಕೆ ಇಷ್ಟೆಲ್ಲ ಜನರು ಬರುತ್ತಿರುವರು. ಅವರಿಗೆ ಎಷ್ಟು ಅಡಿಗೆ ಮಾಡ ಬೇಕೆಂದು ತಿಳಿಯದವರಾಗಿದ್ದೇವೆ" ಎಂದು ಪ್ರಾರ್ಥಿಸಿ, ಶಂಖ-ಘಂಟೆ-ತಾಳ-ವಾದ್ಯ ಮೊದಲಾದ ಧ್ವನಿಗಳಿಂದ ಅರ್ಚಕನು ಪೂಜಿಸಿದನು. ಆ ಮಾತನ್ನು ಕೇಳಿ, ಬ್ರಾಹ್ಮಣರ ದೇವತೆಯಾದ ಆ ದಯಾನಿಧಿಯು ವಿನಯಸಂಪನ್ನನಾದ

ದ್ವಿಜದೇವೋಽಪಿ ಸುಬ್ರಹ್ಮಣ್ಯೋದಯಾನಿಧಿಃ ॥ ೮ ॥ ವಿನಯೇನ ಸಮಾವಿಷ್ಟಂ ಸ್ಮಿತಪೂರ್ವಮಭಾಷತ । ಕದಳೀಪುಂಜಮಾದಾಯ ಛಿತ್ವಾ ತಂ ಚ ಕ್ಷುರಾಗ್ರತಃ ॥ ೯ ॥ ತದ್ಭಾಗಾಂಶ್ಚ ಸಮಾದಾಯ ತಾಮ್ರಪಾತ್ರೇ ವಿನಿಕ್ಷಿಪೇತ್ । ತಜ್ಜಲೇನ್ಯಸ್ಯ ಪಾತ್ರೇ ಚ ತ್ತಾವತ್ಸಂಖ್ಯಂ ಪ್ರಗೃಹ್ಯ ಚ ॥ ೧೦ ॥ ಏಕೈಕಂ ಚ ಸಹಸ್ರಂಚ ಗಣಯಿತ್ವಾ ವಿಚಕ್ಷಣ । ತತ್ಕ್ರಮೇಣೈವ ಪಾಕಂ ಚ ಕುರು ವಿಪ್ರ ಮಮ ಪ್ರಿಯ ॥ ೧೧ ॥ ತಾವತ್ಸಂಖ್ಯಾನಿ ಪಕ್ವಾನಿ ಚರ್ವಾಜ್ಯ ದಧಿಶರ್ಕರಾಮ್ । ಫಲಾನಿ ತತ್ರ ಚಾನೀಯ ಸಮ್ಯಕ್ ಪಾಕಂ ಕುರುಷ್ವಭೋಃ ॥೧೨॥ ಅನ್ನರಾಶಿಂ ತತಃ ಕೃತ್ವಾಮನ್ಮಂತ್ರೋ-ದಕಪ್ರೋಕ್ಷಣಮ್ । ಕುರುಷ್ವ ತ್ವಂ ತದನ್ನಂ ಚ ಹ್ಯಕ್ಷಯ್ಯಂ ಭವತಿ ಧ್ರುವಮ್ ॥೧೩॥ ನಿವೇದ್ಯ ಮೇ ತದ್ಭಾಗೇನ ವೈಶ್ವದೇವಂ ವಿಧಾಯ ಚ । ತಚ್ಛೇಷಮನ್ನರಾಶೌ ಚ ನಿಕ್ಷಿಪೇಸ್ತತ್ಸಮೃದ್ಧ್ಯತಿ ॥ ೧೪ ॥ ಇತ್ಯುಕ್ತ್ವಾ ಷಣ್ಮುಖಃ ಸ್ವಾಮೀ ಹ್ಯರ್ಚಕಸ್ಯ ಮನಸ್ಥಿತಂ।ಸಂಕಲ್ಪಂ ಪೂರಯಿತ್ವಾ ತಮಿದಂ ವಚನಮಬ್ರವೀತ್ ॥೧೫॥ ಮದ್ಭಕ್ತ ಶೃಣು

---

ಅರ್ಚಕನಿಗೆ ನಗುತ್ತ ಹೇಳಿದನು—"ಬಾಳೆಕಾಯಿಗಳ ರಾಶಿಯನ್ನು ತಂದು ಪಲ್ಯಕ್ಕಾಗಿ ಮೆಟ್ಟುಕತ್ತಿಯಲ್ಲಿ ಹಚ್ಚಿ, ತಾಮ್ರದ ದೊಡ್ಡ ಭಾಂಡದಲ್ಲಿ ಆ ತುಂಡುಗಳನ್ನು ಹಾಕಿ, ನೀರುಹೊಯ್ದು, ಅದರಿಂದ ಎಣಿಸಿ ಆ ಹೋಳುಗಳನ್ನು ತೆಗೆದು ॥ ೧೦ ॥ ಒಂದೊಂದು ಸಹಸ್ರವಾಗಿ ಲೆಕ್ಕಮಾಡಿ, ಆ ಲೆಕ್ಕದ ಕ್ರಮದಿಂದ ಇಷ್ಟೇ ಜನರೆಂದು ಊಹಿಸಿ, ಅದಕ್ಕೆ ಬೇಕಾದಷ್ಟು ಅಕ್ಕಿ ಹಾಕಿ ಅಡಿಗೆ ಮಾಡು. ಆ ಹೋಳಿನ ಲೆಕ್ಕದಷ್ಟು ಬಾಳೆಹಣ್ಣುಗಳನ್ನೂ, ಆ ಲೆಕ್ಕ ದಷ್ಟು ಜನರಿಗೆ ಬೇಕಾದ ತುಪ್ಪ ಸಕ್ಕರೆ ಚರು (ಅನ್ನ) ಇವುಗಳ ಪಾಕ ಮಾಡಿ, ಅನ್ನದರಾಶಿ(ಪಲ್ಲ)ಯನ್ನು ಮಾಡಿ, ಅದಕ್ಕೆ ನನ್ನ ಮಂತ್ರಜಲ ವನ್ನು ಪ್ರೋಕ್ಷಿಸಿದರೆ, ಆ ಅನ್ನವು ನಿಶ್ಚಯವಾಗಿಯೂ ಅಕ್ಷಯವಾಗು ವುದು. ಆ ಅನ್ನವನ್ನು ನನಗೆ ಸಮರ್ಪಿಸಿ, ಅದರ ಭಾಗದಿಂದ ವೈಶ್ವದೇವ ಮಾಡಿ, ಸಮರ್ಪಿಸಿದ ಅಂಶವನ್ನು ಅನ್ನದ ರಾಶಿಯಲ್ಲಿಟ್ಟರೆ ಅದು ವೃದ್ಧಿ ಯಾಗುವುದು" ಹೀಗೆಂದು ಷಣ್ಮುಖನು ಅರ್ಚಕನ ಮನಸ್ಸನ್ನು ಪ್ರವೇಶಿಸಿ, ಬ್ರಾಹ್ಮಣರಿಗೆ ಅನ್ನದಾನ ಮಾಡುವ ತನ್ನ ಸಂಕಲ್ಪವನ್ನು ಪೂರೈಸಿ, ಹೀಗೆಂದನು—॥ ೧೫ ॥ "ಎಲೈ ನನ್ನ ಭಕ್ತನೆ! ಕೇಳು. ನನ್ನ ಅನು

ಮದ್ವಾಕ್ಯಮನ್ನಂ ಚ ಮದನುಗ್ರಹಂ । ಸರ್ವಪಾಪಪ್ರಶಮನಂ ಸರ್ವೋಪದ್ರವನಾಶನಮ್ ॥೧೬॥ ಮದ್ಭಕ್ತೋ ಭೂತಲೇ ಶಾಯೀ ಮನ್ನೈವೇದ್ಯ ಪ್ರಭೋಜನಾತ್। ಉಚ್ಛಿಷ್ಟೋಪರಿ ಸಂವಿಶ್ಯ ಶಯಿತಃ ಪ್ರಾಂಗಣೇಽಗ್ರತಃ॥೧೭॥ ಅಂಗಪ್ರದಕ್ಷಿಣಂ ಕುರ್ವನ್ ಕುಷ್ಠರೋಗಾ-ದ್ವಿಮುಚ್ಯತೇ । ಉಚ್ಛಿಷ್ಟೋಪರಿಶಾಯೀ ಸಂಚರೇದಂಗಪ್ರದಕ್ಷಿಣಂ ॥೧೮॥ ನಾನಾವ್ಯಾಧೇಃ ಪಿಶಾಚೇಭ್ಯೋ ಮುಚ್ಯತೇ ನಾತ್ರಸಂಶಯಃ। ಪ್ರದಕ್ಷಿಣಂ ನಮಸ್ಕಾರಂ ಕರತಾಲೈಸ್ಸನರ್ತನೈಃ ॥ ೧೯ ॥ ಮಮಾ-ಲಯಸ್ಯ ಪರಿತೋ ಯಃ ಕರೋತಿ ದ್ವಿಜೋತ್ತಮಃ । ಸ ಮಾಮೇವ ಸಮಾಸಾದ್ಯ ವಾಂಛಿತಾರ್ಥಂ ಲಭೇದ್ಧ್ರುವಮ್ ।।೨೦॥ ಮತ್ತೀರ್ಥ-ಸ್ನಾನಪಾನಾನಿ ಮದಗ್ರೇಶಯನಂ ತಥಾ । ಮತ್ಕಥಾಶ್ರವಣಂ ಚಾಪಿ ಯಸ್ಯ ತಸ್ಯ ನ ದುರ್ಗತಿಃ ।। ೨೧ ।। ಪುತ್ರವಾನ್ ಧನವಾನ್ವಾಪಿ ಹ್ಯಾಯುಷ್ಮಾನ್ ವ್ಯಾಧಿವರ್ಜಿತಃ । ಚಿರಕಾಲ ಸುಖಂ ಭುಕ್ತ್ವಾ ದೇಹಾಂತೇ ಮುಕ್ತಿಮಾಪ್ನುಯಾತ್ ।। ೨೨ ॥ ಅರೋಗೀ ವ್ಯಾಧಿ-ಸಂಪನ್ನೋ ಹ್ಯಪುತ್ರೋಽಪಿ ಸುಪುತ್ರಕಃ । ದರಿದ್ರೋ ಧನವಾನೇವ ಭವೇದ್ಧಿ ಮದನುಗ್ರಹಾತ್ ।। ೨೩ ॥ ಇತ್ಯುಕ್ತ್ವಾಂತರ್ದಧೇ ದೇವಃ

---

ಗ್ರಹವೂ ನನ್ನ ಪ್ರಸಾದರೂಪವಾದ ಅನ್ನವೂ ಕೂಡ ಸರ್ವಪಾಪಗಳನ್ನೂ ಉಪದ್ರವಗಳನ್ನೂ ನಾಶಮಾಡತಕ್ಕುದು. ನನ್ನ ಭಕ್ತನು ನಿತ್ಯದಲ್ಲಿಯೂ ನೆಲದಲ್ಲಿ ಮಲಗುತ್ತ, ನನ್ನ ನೈವೇದ್ಯವನ್ನು ಉಣ್ಣುತ್ತ, ಬ್ರಾಹ್ಮಣರುಂಡ ಉಚ್ಛಿಷ್ಟ(ಎಂಜಲು)ದ ಅಂಗಣದಲ್ಲಿ ಮಲಗಿ, ಅಂಗಪ್ರದಕ್ಷಿಣೆ ಮಾಡಿದರೆ ಕುಷ್ಠರೋಗವನ್ನು ಪರಿಹರಿಸಿಕೊಳ್ಳುವನು. ಹಾಗೆ ಉಚ್ಛಿಷ್ಟ ಪ್ರದಕ್ಷಿಣೆ ಮಾಡಿದವನು ಅನೇಕ ರೋಗ ಮತ್ತು ಪಿಶಾಚ ಬಾಧೆಗಳನ್ನು ಕಳೆದು ಕೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ. ಯಾವ ಬ್ರಾಹ್ಮಣನು ಕೈಚಪ್ಪಾಳೆ ತಟ್ಟುತ್ತ, ಕುಣಿಯುತ್ತ, ಪ್ರದಕ್ಷಿಣೆ ನಮಸ್ಕಾರಗಳನ್ನು ನನ್ನ ಮಂದಿರದ ಸುತ್ತಲೂ ನಡೆಸುವನೋ, ಆತನು ನಿಶ್ಚಯವಾಗಿ ತನ್ನ ಇಷ್ಟಾರ್ಥ ವನ್ನು ಪಡೆಯುವನು. ॥ ೨೦ ॥ ನನ್ನ ತೀರ್ಥದಲ್ಲಿ ಸ್ನಾನ ಪಾನ, ನನ್ನ ಇದಿರಿನಲ್ಲಿ ಶಯನ, ನನ್ನ ಕಥೆಯ ಶ್ರವಣ, ಇವುಗಳನ್ನು ಮಾಡಿದವನಿಗೆ ದುರ್ಗತಿಯು ಬರಲಾರದು. ಆತನು ಸಂತಾನ--ಸಂಪತ್ತು--ಆಯುಸ್ಸು-ಆರೋಗ್ಯ ಚಿರಕಾಲ ಸುಖಭೋಗಗಳನ್ನು ಈ ಲೋಕದಲ್ಲಿ ಪಡೆದು, ಕೊನೆಗೆ ಮೋಕ್ಷವನ್ನು ಹೊಂದುವನು. ನನ್ನ ಅನುಗ್ರಹದಿಂದ ರೋಗಿಯು

ಸುಬ್ರಹ್ಮಣ್ಯೋ ದಯಾನಿಧಿಃ । ಸರ್ಪರೂಪೀ ಬಿಲದ್ವಾರಂ ಪ್ರವಿವೇಶ ಮುದಾನ್ವಿತಃ ॥ ೨೪ ॥

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣೇ
ಪಂಚಮೋಽಧ್ಯಾಯಃ ॥ ೫ ॥

---

## ಅಥ ಷಷ್ಠೋಽಧ್ಯಾಯಃ

---

ಶ್ರೀಸೂತ ಉವಾಚ–ಕುಮಾರಧಾರಾಮಹಾತ್ಮ್ಯಂ ಪ್ರವಕ್ಷ್ಯಾಮಿ ವಿಶೇಷತಃ । ಯಚ್ಛ್ರುತ್ವಾ ಮುಚ್ಯತೇ ಜಂತುರ್ಜನ್ಮ ಸಂಸಾರ-ಬಂಧನಾತ್ ॥ ೧ ॥ ಕುಮಾರಧಾರಾಸ್ನಾನಂ ಯಃ ಕರೋತಿ ಸತತಂ ನರಃ । ಪ್ರಭಾತೇ ಪ್ರತ್ಯಹಂ ನೂನಂ ಮೌನೇನ ಸ್ವರ್ಗಮಾಪ್ನುಯಾತ್

---

ಆರೋಗ್ಯವಂತನೂ, ಅಪುತ್ರನು ಪುತ್ರವಂತನೂ, ಬಡವನು ಧನಿಕನೂ ಆಗುವನು." ಹೀಗೆ ಅಪ್ಪಣೆಯಿತ್ತು, ದಯಾನಿಧಿಯಾದ ಸುಬ್ರಹ್ಮಣ್ಯನು ಸರ್ಪರೂಪದಿಂದ ಗುಹೆಯನ್ನು ಹೊಕ್ಕು ಅದೃಶ್ಯನಾದನು." ॥ ೨೪ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಐದನೆಯ ಅಧ್ಯಾಯವು ಮುಗಿದುದು ॥ ೫ ॥

---

ಸೂತರೆಂದರು— "ವಿಶೇಷವಾಗಿ ಕುಮಾರಧಾರೆಯ ಮಹಿಮೆಯನ್ನು ಹೇಳುವೆನು. ಅದನ್ನು ಕೇಳಿದವನು ಸಂಸಾರಬಂಧದಿಂದ ಮುಕ್ತನಾಗುವನು. ನಿತ್ಯದಲ್ಲಿ ಮೌನವ್ರತದಿಂದ ಪ್ರಾತಃಕಾಲ ಆ ನದಿಯಲ್ಲಿ ಸ್ನಾನಮಾಡುವವನು ಸ್ವರ್ಗಗತಿಯನ್ನೈದುವನು. ಸುಬ್ರಹ್ಮಣ್ಯನ ಇದಿರಿನಲ್ಲಿ, ಪಶ್ಚಿಮಾಭಿಮುಖವಾಗಿ ಹರಿಯುವ ಪುಣ್ಯಕರವಾದ ಕುಮಾರಧಾರೆಯಲ್ಲಿ ಭಕ್ತಿಯಿಂದ ಸ್ನಾನ

॥ ೨ ॥ ಕುಮಾರಧಾರಾ ಯಾ ಪುಣ್ಯಾ ಸುಬ್ರಹ್ಮಣ್ಯಸ್ಯ ಚಾಗ್ರತಃ । ಪ್ರವಹಿಷ್ಯತಿ ವೇಗೇನ ಪಶ್ಚಿಮಾಭಿಮುಖೀ ತದಾ ॥ ೩ ॥ ತತ್ರ ಸ್ನಾತ್ವಾ ನರೋ ಭಕ್ತ್ಯಾ ವಿಷ್ಣುಲೋಕಂ ಸ ಗಚ್ಛತಿ । ಬ್ರಾಹ್ಮಣಘ್ನಃ ಸುರಾಪಾಯಿಶ್ಚ । ಸ್ತೇಯೀ ಚ ಗುರುತಲ್ಪಗಃ ॥ ೪ ॥ ಉಪಪಾತಕಿನಶ್ಚೈವ ಹ್ಯತ್ರ ಸ್ನಾತ್ವಾ ದಿವಂಗತಾಃ । ಕುಮಾರಧಾರಾತೋಯೇಷು ಯೇ ಮಜ್ಜಂತಿ ನರಾಸ್ಸಕೃತ್ ॥ ೫ ॥ ಸಪ್ತಜನ್ಮಕೃತಾತ್ಪಾಪಾನ್ಮುಚ್ಯಂತೇ ವೃಶ್ಚಿಕೇ ರವೌ । ಕುಮಾರೇಣ ಧೃತಾ ದೇವೀ ನದೀನಾಂ ಪ್ರವರಾ ಶುಭಾ ॥ ೬ ॥ ಕುಮಾರಧಾರಾ ವಿಜ್ಞೇಯಾ ಕುಮಾರೇಣ ಧೃತಾ ಯತಃ । ಕುಮಾರಧಾರಾತೋಯಂ ಚ ಸ್ಪೃಷ್ಟ್ವಾ ವಾಯುಃ ಪ್ರವರ್ತತೇ ॥ ೭ ॥ ತದ್ವಾತಸ್ಪರ್ಶಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ । ಕುಮಾರಧಾರಾಮಧ್ಯಸ್ಥೇ ಶಂಖತೀರ್ಥಾಭಿಧೇ ಶುಭೇ ॥ ೮ ॥ ಪಂಚಮ್ಯಾಂ ವೈ ನರಃ ಸ್ನಾತ್ವಾ ಮುಚ್ಯತೇ ಸರ್ವಬಂಧನೈಃ । ಋಷಯ ಊಚುಃ — ಏತತ್ಸಾಮರ್ಥ್ಯಮಸ್ಯಾಸ್ತು ಕಥಮಾಸೀದ್ವದಸ್ವ ನಃ ॥ ೯ ॥ ತತ್ರ ಸ್ನಾತ್ವಾ ನರಃ ಕೋ ವಾ ತಾಂ ಸಿದ್ಧಿಂ ಪ್ರಾಪ್ತವಾನ್ನರಃ । ಶ್ರೀಸೂತ ಉವಾಚ — ಕುಮಾರಧಾರಾನದ್ಯಾಂ ವೈ ಯೋ ನರಃ ಸ್ನಾನಮಾಚರೇತ್ ॥ ೧೦ ॥ ಮುಕ್ತೋ ಭವತಿ ಭೋ ವಿಪ್ರಾಸ್ತದ್ವೃ-

---

ಮಾಡಿದವನು ವಿಷ್ಣುಲೋಕವನ್ನು ಸೇರುವನು. ಬ್ರಹ್ಮಹತ್ಯೆ–ಮದ್ಯಪಾನ–ಗುರುಪತ್ನೀಸಂಸರ್ಗಗಳೆಂಬ ಪಾತಕಮಾಡಿದವರಾಗಲಿ, ಇತರ ಉಪಪಾತಕ ಮಾಡಿದವರಾಗಲಿ, ಇದರಲ್ಲಿ ಮಿಂದವರು ಸ್ವರ್ಗಕ್ಕೆ ತೆರಳುವರು. ಒಮ್ಮೆಯಾದರೂ ಕುಮಾರಧಾರೆಯಲ್ಲಿ ಸೂರ್ಯನು ವೃಶ್ಚಿಕಕ್ಕೆ ಬಂದಾಗ ಸ್ನಾನ ಮಾಡಿದವರು ॥ ೫ ॥ ಏಳುಜನ್ಮಗಳ ಪಾಪವನ್ನು ಕಳೆದುಕೊಳ್ಳುವರು. ಕುಮಾರಪರ್ವತದಿಂದ ಧರಿಸಲ್ಪಟ್ಟ ಆ ನದಿಯ ನೀರನ್ನು ಮುಟ್ಟಿಬರುವ ಗಾಳಿಯು ತಗಲಿದ ಮಾತ್ರದಿಂದ ಸರ್ವ ಪಾಪವೂ ಪರಿಹಾರವಾಗುವುದು. ಕುಮಾರಧಾರೆಯ ಮಧ್ಯದಲ್ಲಿರುವ ಶಂಖತೀರ್ಥದಲ್ಲಿ, ಪಂಚಮೀ ದಿನ ಸ್ನಾನ ಮಾಡಿದರೆ ಸಮಸ್ತ ಬಂಧನಗಳೂ ಪರಿಹಾರವಾಗುವುವು.” ಋಷಿಗಳೆಂದರು—“ಈ ನದಿಗೆ ಇಂತಹ ಶಕ್ತಿಯು ಎಲ್ಲಿಂದ ಬಂದಿದೆ? ಈ ತೀರ್ಥದಲ್ಲಿ ಯಾವನು ಸ್ನಾನಮಾಡಿ ಯಾವ ಸಿದ್ಧಿಯನ್ನು ಪಡೆದಿರುವನು?” ಸೂತರೆಂದರು— ॥ ೧೦ ॥ “ಅದರ ವೃತ್ತಾಂತವನ್ನು ಹೇಳುವೆನು. ಲವಣ

ತ್ತಾಂತಂ ವದಾಮಿ ವಃ।ಲವಣಾರ್ಣವದೇಶಸ್ಥೋ ವಾಣಿಜ್ಯೋ ಕಶ್ಚಿದಸ್ತಿ ಹಿ ॥೧೧॥ ವ್ಯವಹಾರನಿಮಿತ್ತೇನ ವಾಣಿಜ್ಯೋ ಧನವಾನ್ ಭೃಶಮ್ । ರತ್ನಾನಿ ಚ ಗೃಹೀತ್ವಾಸೌ ವಜ್ರವೈಡೂರ್ಯ ಮೌಕ್ತಿಕಾನ್ ॥ ೧೨ ॥ ಪ್ರವಾಳ ಸ್ವರ್ಣ ರಜತತಾಮ್ರಾಯಸ್ತ್ರಪುಸೀಸಕಮ್।ಗೃಹೀತ್ವಾವಾಹ-ನೈಸ್ಸರ್ವಂ ವಣಿಕ್ ಶ್ರೇಷ್ಠೋ ಮಹಾಪುರೀಮ್ ॥ ೧೩ ॥ ಸಮಾಗ-ಮ್ಯಾತ್ರ ಸ ವಣಿಕ್ ಸರ್ವೈಃ ಸಖ್ಯಂ ಚಕಾರ ಸಃ । ವಿಕ್ರಯಿತ್ವಾಥ ತತ್ಸರ್ವಂ ಸಗೃಹೀತ್ವಾ ಧನಂ ತತಃ ॥೧೪॥ ವಿಸೃಜ್ಯ ಸರ್ವ ಮಾನೀತಂ ತತ್ರಸ್ಥಂ ಚ ಮಹೀತಳೇ । ಏಲಾಲವಂಗಕರ್ಪೂರಜೀರಕಂ ಹಿಂಗು-ಪೂರ್ವಕಮ್ ॥ ೧೫ ॥ ಸ್ವೀಕೃತ್ಯ ನಗರಂ ಗಂತುಂ ಪ್ರಚಕ್ರಾಮ ಸ ಸತ್ವರಮ್ । ತಾವದ್ಯಾತೋ ಯತಿಸ್ತತ್ರ ತಂ ದೃಷ್ಟ್ವಾ ಸ ಯತಿಂ ವಣಿಕ್ ॥ ೧೬ ॥ ಪ್ರಣಮ್ಯ ಪ್ರಾಂಜಲಿರ್ಭೂತ್ವಾ ಜಯಶಬ್ದ-ಮುದೀರಯನ್ । ಆತ್ಮಾನಮಸುತಂ ದೃಷ್ಟ್ವಾ ಸಂತಾನಾರ್ಥೀ ಯತಿಂ ವಣಿಕ್॥೧೭॥ಊಚೇ ಸ್ವದೇಶಂ ಗಚ್ಛಾಮಿ ಸಿಂಧುತೀರಸ್ಥಿತಂ ಮುನೇ-ಭವತೋ ಗಮನಂ ಕುತ್ರ ಕಸ್ಮಾದ್ದೇಶಾತ್ಸಮಾಗತಃ ॥ ೧೮ ॥ ಯತಿರುವಾಚ–ಕುಮಾರಪರ್ವತಂ ದೃಷ್ಟುಮಾಗತೋಽಹಂ ವಣಿಕ್-

---

ಸಮುದ್ರದ ಬಳಿಯ ದೇಶದಲ್ಲೊಬ್ಬ ವೈಶ್ಯನು ವ್ಯಾಪಾರದಿಂದ ಧನವಂತನಾಗಿ, ವಜ್ರವೈಡೂರ್ಯ ಮತ್ತು ಹವಳ ಮುಂತಾದ ರತ್ನಗಳನ್ನೂ, ಚಿನ್ನ-ಬೆಳ್ಳಿ-ತಾಮ್ರ-ಕಬ್ಬಿಣ-ತವರ-ಸೀಸ ಮುಂತಾದವುಗಳನ್ನೂ ವಾಹನಗಳಲ್ಲಿ ಹೊರಿಸಿಕೊಂಡು ಶ್ರೇಷ್ಠವಾದ ಪಟ್ಟಣಕ್ಕೆ ತೆರಳಿ, ಅದನ್ನೆಲ್ಲ ಮಾರಿ, ದ್ರವ್ಯಗಳನ್ನು ಪಡೆದು, ಅಲ್ಲಿರುವ ಏಲಕ್ಕಿ–ಲವಂಗ--ಕರ್ಪೂರ--ಜೀರಿಗೆ--ಹಿಂಗು ಮುಂತಾದುವುಗಳನ್ನು ॥ ೧೫ ॥ ಪಡೆದುಕೊಂಡು ಬೇಗನೆ ತನ್ನ ದೇಶಕ್ಕೆ ಬರಲು ಹೊರಟನು. ಅಷ್ಟರಲ್ಲಿ ಅಲ್ಲಿ ಬಂದ ಒಬ್ಬ ಯತಿಯನ್ನು ಕಂಡು, ವಂದಿಸಿ, ಕೈಜೋಡಿಸಿ ಜಯಜಯವೆಂದು ಹೊಗಳಿ, ತಾನು ಸಂತಾನವಿಲ್ಲದವನಾದುದರಿಂದ ಯತಿಯ ಅನುಗ್ರಹದಿಂದ ಸಂತಾನವನ್ನು ಪಡೆಯಬೇಕೆಂದು ಇಚ್ಛಿಸಿ,—"ಯತೀಶ್ವರರೇ! ನಾನು ಸಮುದ್ರದ ಬಳಿಯಿರುವ ನನ್ನ ದೇಶಕ್ಕೆ ಹೊರಟಿರುವೆನು. ತಾವು ಯಾವ ದೇಶದಿಂದ ಎಲ್ಲಿಗೆ ಹೊರಟವರು?" ಎನ್ನಲು, ಯತಿಯೆಂದನು—"ವೈಶ್ಯಶ್ರೇಷ್ಠನೆ! ನಾನು ಇಂದು ಕುಮಾರಪರ್ವತವನ್ನು ನೋಡಲು ಬಂದಿರುವೆನು. ಸುಬ್ರಹ್ಮಣ್ಯನನ್ನು ಕಂಡು,

ಪತೇ। ಸುಬ್ರಹ್ಮಣ್ಯಮಹಂ ದೃಷ್ಟ್ವಾ ಸ್ನಾತ್ವಾ ನದ್ಯಾಂತದಗ್ರತಃ॥೧೯॥ ಕುಮಾರಧಾರಾನದ್ಯಾಂ ವೈ ದೃಷ್ಟ್ವಾ ವೇದಾಂಗಪಾರಗಾನ್ । ನತ್ವಾ ಗಮಿಷ್ಯೇ ಚಾದ್ಯಾಹಂ ಹೇವಣಿಗ್ ಧನನಾಯಕ ।। ೨೦ ।। ಇತ್ಥಂ ಶ್ರುತ್ವಾ ಯತೇರ್ವಾಕ್ಯಂ ವಣಿಜಾಂ ಪ್ರವರಸ್ತದಾ । ನಮಸ್ಕೃತ್ಯ ತಿಹರ್ಷೇಣ ಭಕ್ತ್ಯಾ ಹೇತದುವಾಚಹ ॥ ೨೧॥ ಕಮರ್ಥಂ ಲಭತೇ ತತ್ರ ಕಾನಿ ತೀರ್ಥಾನಿ ತತ್ರ ವೈ। ವರ್ತಂತೇ ಮುನಿಶಾರ್ದೂಲ ತತ್ಸರ್ವಂ ವದ ಮೇ ಪ್ರಭೋ ॥೨೨॥ ಅಹಮದ್ಯಾನುಗಚ್ಛಾಮಿ ಯತ್ತ್ವದುಕ್ತಂ ಕರೋಮಿ ತತ್ । ಇತ್ಯುದೀರಿತಮಾಕರ್ಣ್ಯ ವಣಿಜಂ ಸ ಯತಿಸ್ತದಾ ॥ ೨೩ ॥ ತಂ ಪ್ರತ್ಯಾಹ ವಚೋ ಭೂಯಸ್ತದ್ಭ್ರಾಂತಿವಿನಿವರ್ತಕಃ ಶೃಣು ವಾಣಿಜ್ಯರತ್ನೇಶ ಧನಾಂದೀನಾಂ ಚ ನಾಯಕ ॥ ೨೪ ॥ ಸುಬ್ರಹ್ಮಣ್ಯಸ್ಯ ಮಾಹಾತ್ಮ್ಯಮಾಖ್ಯಾಸ್ಯಾಮಿ ಶುಭಂ ಚ ತೇ । ಸುಬ್ರಹ್ಮಣ್ಯೋ ಮಹಾಸೇನಃ ಸರ್ವೇಷಾಂ ತು ಕೃಪಾಕರಃ ॥೨೫॥ ಅಪುತ್ರಾಣಾಂ ಪುತ್ರದಾತಾ ಪುತ್ರಿಣಾಂಚ ಸುಖಪ್ರದಃ । ಯಾ ನದೀ ಸನ್ನಿಧೌ ತಸ್ಯ ಸ್ಥಿತಾ ಚ ಪ್ರವಹಿಷ್ಯತಿ ॥ ೨೬ ॥ ತಜ್ಜಲೇ ತು ನರಃ ಸ್ನಾತ್ವಾ ಮುಚ್ಯತೇ ಸರ್ವಪಾತಕೈಃ । ಇಹ ಜನ್ಮನಿ . ದಾರಿದ್ರ್ಯಂ ಕದಾಚಿನ್ನೈವ ಲಭ್ಯತೇ ॥ ೨೭ ॥ ಧನವಾನ್ ಧಾನ್ಯವಾನ್ನಿತ್ಯಂ

---

ಆತನಿದಿರು ಕುಮಾರಾಧಾರಾ ನದಿಯಲ್ಲಿ ಮಿಂದು, ವೇದವೇದಾಂಗಗಳನ್ನು ಸಂಪೂರ್ಣ ತಿಳಿದ ಬ್ರಾಹ್ಮಣರನ್ನು ವಂದಿಸಿ, ಹೋಗುವೆನು.” ॥ ೨೦ ॥ ಈ ಮಾತನ್ನು ಕೇಳಿ, ವೈಶ್ಯಶ್ರೇಷ್ಠನು ಆತನಿಗೆ ವಂದಿಸಿ, ಭಕ್ತಿಯಿಂದ ಪ್ರಾರ್ಥಿಸಿದನು – “ಪುರುಷನು ಆ ಕ್ಷೇತ್ರದಲ್ಲಿ ಯಾವ ಅಭೀಷ್ಟವನ್ನು ಹೊಂದುವನು? ಅಲ್ಲಿ ಯಾವ ತೀರ್ಥಗಳಿವೆ? ಯತಿವರರೆ! ಅದನ್ನೆಲ್ಲ ನನಗೆ ಹೇಳಿರಿ. ನಾನೂ ನಿಮ್ಮನ್ನು ಹಿಂಬಾಲಿಸಿ ಬಂದು ನೀವು ಹೇಳಿದುದನ್ನು ಮಾಡುವೆನು”. ಯತಿಯೆಂದನು–“ಎಲೈ ರತ್ನ ಮೊದಲಾದ ಸಂಪತ್ತಿನ ಅಧಿಪತಿಯೆ! ಸುಬ್ರಹ್ಮಣ್ಯನ ಮಹಿಮೆಯನ್ನು ಹೇಳುವೆನು. ಎಲ್ಲರಲ್ಲಿಯೂ ದಯಾಳುವಾದ ಸುಬ್ರಹ್ಮಣ್ಯನು ॥ ೨೫ ॥ ಅಪುತ್ರರಿಗೆ ಪುತ್ರರನ್ನು ಕೊಡುವನು. ಪುತ್ರವಂತರಿಗೆ ಸುಖವನ್ನೀಯುವನು. ಆತನಿದಿರು ಹರಿಯುವ ನದಿಯಲ್ಲಿ ಮಿಂದವನು ಸರ್ವಪಾಪಪರಿಹಾರಮಾಡಿಕೊಳ್ಳುವನು. ಈ ಜನ್ಮದಲ್ಲಿ ಎಂದಿಗೂ ದಾರಿದ್ರ್ಯವನ್ನು ಹೊಂದಲಾರನು. ಆತನು ಧನ-ಧಾನ್ಯ-ಬಹುಮಾನಗಳನ್ನು ಪಡೆಯುವನು. ಜೇಷ್ಠೆಯಾದ ಕುಮಾರಧಾರೆ

ಬಹುಮಾನಯುತಸ್ಸದಾ । ಜ್ಯೇಷ್ಠಾನದೀ ಕುಮಾರಾಖ್ಯಾ ಪ್ರವಹಿಷ್ಯತಿ ತತ್ರ ವೈ ॥೨೮॥ ತಸ್ಯಾಂ ವೈ ಮತ್ಸ್ಯ ತೀರ್ಥಂ ಚ ಸರ್ವಾಭೀಷ್ಟಪ್ರದಂ ನೃಣಾಮ್ । ದೃಶ್ಯಂತೇಽದ್ಯಾಪಿ ಮತ್ಸ್ಯಾಶ್ಚ ತಸ್ಮಿನ್ ವೈ ದೇವಸೇವಿತೇ ॥೨೯॥ ತತ್ರ ಸ್ನಾನಂ ಚ ಯಃ ಕುರ್ಯಾದ್ಗೋಧನಾದಿಸಮೃದ್ಧಿಮಾನ್ । ಮನಃಸ್ಥಿತಂ ಕಾಮಿತಂ ಸ್ವಂ ಲಭತೇ ಶಿಖಿವಾಹನಾತ್ ॥೩೪॥ ತತ್ಪೂರ್ವಭಾಗೇ ಶಂಖಾಖ್ಯಂ ತೀರ್ಥಂ ಪಾಪಪ್ರಣಾಶನಮ್।ತತ್ಪೂರ್ವಭಾಗೇ ಚಕ್ರಾಖ್ಯಂತೀರ್ಥಂಲೋಕೈಕಪಾವನಮ್ ॥೩೦॥ ತತ್ಪೂರ್ವಭಾಗೇ ರಾಮಾಖ್ಯತೀರ್ಥಂ ಲೋಕಮಲಾಪಹಮ್ ಭೃಗುರಾಮಸ್ತಪಸ್ತತ್ರ ಚಕಾರ ಪುರುಷೋತ್ತಮಃ ॥ ೩೨ ॥ ತತ್ರ ಸ್ನಾತ್ವಾ ನರೋ ಭಕ್ತ್ಯಾ ಪುಮರ್ಥಂ ಲಭತೇಽಖಿಲಮ್ । ಬಿಲದ್ವಾರಾಣಿ ತಿಷ್ಠಂತಿ ಸುಬ್ರಹ್ಮಣ್ಯಸ್ಯ ಚಾಗ್ರತಃ ॥೩೩॥ ವರ್ತಂತೇ ತತ್ರ ತೀರ್ಥಾನಿ ಗಂಗಾದೀನಿ ಶುಭಾನಿ ಚ । ತತ್ರ ಪ್ರವಿಶ್ಯ ಯಃ ಸ್ನಾಯಾದ್ಗಂಗಾಸ್ನಾನಫಲಂ ಲಭೇತ್ ॥ ೩೪ ॥ ತತೋಽಪಿ ತೀರ್ಥಜಾಲಾನಿ ದೇವಖಾತಾನಿ ಭೂರಿಶಃ।ತ್ವಂ ತತ್ರಗತ್ವಾವೈಶ್ಯೇಂದ್ರಸ್ನಾನದಾನಾದಿಕಂ ಕುರು ॥೩೫॥ ಸುಬ್ರಹ್ಮಣ್ಯಸ್ಸ ಧರ್ಮಾತ್ಮಾದದಾತೀಷ್ಟಂ ಚ ಸೇವಿತಃ।

---

ಯಲ್ಲಿ ಮತ್ಸ್ಯತೀರ್ಥವೆಂಬ ತೀರ್ಥವು ಸರ್ವಾಭೀಷ್ಟವನ್ನೀಯುವುದು. ದೇವತೆಗಳಿಂದ ಸೇವಿಸಲ್ಪಡುವ ಆ ತೀರ್ಥದಲ್ಲಿ ಈಗಲೂ ಮತ್ಸ್ಯಗಳು ತುಂಬಿವೆ. ಅದರಲ್ಲಿ ಮಿಂದರೆ ಗೋವು ದ್ರವ್ಯ ಮೊದಲಾದುವುಗಳ ಸಮೃದ್ಧಿಯುಳ್ಳವನಾಗಿ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ಸುಬ್ರಹ್ಮಣ್ಯನ ಅನುಗ್ರಹದಿಂದ ಪಡೆಯುವನು. ॥ ೩ ॥ ಮತ್ಸ್ಯತೀರ್ಥದ ಪೂರ್ವಭಾಗದಲ್ಲಿ ಶಂಖತೀರ್ಥವೂ, ಅದರ ಪೂರ್ವಭಾಗದಲ್ಲಿ ಚಕ್ರತೀರ್ಥವೂ, ಅದರ ಪೂರ್ವಭಾಗದಲ್ಲಿ ರಾಮತೀರ್ಥವೂ ಇವೆ. ಆ ರಾಮತೀರ್ಥವೆಂಬಲ್ಲಿಯೂ ಪರಶುರಾಮನು ತಪಸ್ಸು ಮಾಡಿದ್ದನು. ಆ ತೀರ್ಥಗಳಲ್ಲಿ ಭಕ್ತಿಯಿಂದ ಮಿಂದವನು ಸಮಸ್ತ ಪುರುಷಾರ್ಥಗಳನ್ನು ಪಡೆಯುವನು. ಸುಬ್ರಹ್ಮಣ್ಯನ ಇದಿರಿನಲ್ಲಿ ಗುಹೆಯ ದ್ವಾರಗಳಿವೆ. ಅವುಗಳಲ್ಲಿ ಗಂಗಾದಿ ತೀರ್ಥಗಳಿವೆ. ಆ ಗುಹೆಗಳಲ್ಲಿ ಮತ್ತು ಮುಂದಕ್ಕೆ ಅನೇಕ ದೇವತೆಗಳಿಂದ ನಿರ್ಮಿತಗಳಾದ ತೀರ್ಥಗಳಿವೆ. ಆದುದರಿಂದ ವೈಶ್ಯಶ್ರೇಷ್ಠನೆ! ನೀನು ಅಲ್ಲಿ ಮಿಂದು, ಸ್ನಾನ-ದಾನ ಮೊದಲಾದ ಸತ್ಕರ್ಮಗಳನ್ನು ಮಾಡು. ॥ ೩೫ ॥ ಅದರಿಂದ ಧರ್ಮದೇವತೆಯಾದ

ಇತಿ ಸರ್ವಂ ಸಮಾಕರ್ಣ್ಯ ಯಯೌ ತೇನ ಸಹೈವ ಚ ॥ ೩೬ ॥ ಸುಬ್ರಹ್ಮಣ್ಯಸ್ಯಸಾಮೀಪ್ಯಂ ಗತ್ವಾ ಸ್ನಾನಂ ಚಕಾರ ಸಃ। ಸರ್ವದಾನಾನಿ ತತ್ರೈವ ಕೃತ್ವಾಸೌ ದೇವಸನ್ನಿಧೌ ॥ ೩೭ ॥ ಸುಬ್ರಹ್ಮಣ್ಯಪ್ರಸಾದಂ ತು ಬುಭುಂಜೇ ಸ ವಣಿಕ್ಪತಿಃ । ತತಃ ಸ್ವದೇಶಂ ಸಂಪ್ರಾಪ್ಯ ಪ್ರಾಪ್ಯ ಸಂತಾನ-ಮುತ್ತಮಮ್ ॥೩೮॥ ಜನ್ಮನೀಹ ಸುಖಂ ಭುಕ್ತ್ವಾ ದೇಹಾಂತೇ ಚ ವಿರಾಡಭೂತ್ । ಶಂಕರ ಉವಾಚ—ಏವಂ ಸ್ತುತ್ವಾ ದ್ವಿಜಾಸ್ಸರ್ವೇ ಸುಬ್ರಹ್ಮಣ್ಯಸ್ಯ ವೈಭವಮ್ । ತಥಾ ಮಹಿತನದ್ಯಾಶ್ಚ ಕೃತಕೃತ್ಯಾಸ್ತ-ದಾಭವನ್ ॥ ೩೮ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯ ಕ್ಷೇತ್ರಪುರಾಣೇ
ಷಷ್ಠೋಽಧ್ಯಾಯಃ ॥ ೬ ॥

---

ಸುಬ್ರಹ್ಮಣ್ಯನು ಸೇವಿಸಲ್ಪಟ್ಟವನಾಗಿ ನಿನ್ನ ಇಷ್ಟಾರ್ಥಗಳನ್ನೀಯುವನು" ಹೀಗೆಂದು ಯತಿಯ ಮಾತನ್ನು ಕೇಳಿ ವೈಶ್ಯನು ಆತನೊಡನೆ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ತೆರಳಿ, ಆ ತೀರ್ಥದಲ್ಲಿ ಮಿಂದು, ದೇವರಿದಿರಿನಲ್ಲಿ ಸರ್ವ ದಾನಗಳನ್ನೂ ಮಾಡಿ, ಸುಬ್ರಹ್ಮಣ್ಯನ ಪ್ರಸಾದವನ್ನು ಸ್ವೀಕರಿಸಿ, ತನ್ನ ದೇಶಕ್ಕೆ ಹೋಗಿ ಆ ದೇವರ ಅನುಗ್ರಹದಿಂದ ಶ್ರೇಷ್ಠ ಸಂತಾನವನ್ನು ಪಡೆದು ಆ ಜನ್ಮದಲ್ಲಿ ಇಹಲೋಕದ ಸುಖವನ್ನೆಲ್ಲ ಭೋಗಿಸಿ, ಜನ್ಮಾಂತರದಲ್ಲಿ ಸಾರ್ವಭೌಮನಾಗಿ ಹುಟ್ಟಿದನು." ರುದ್ರದೇವನೆಂದನು— "ಆ ಸಮಸ್ತ ಬ್ರಾಹ್ಮಣರು ಈ ರೀತಿಯಲ್ಲೆ ಸುಬ್ರಹ್ಮಣ್ಯ ದೇವನ ಮಹಿಮೆಯನ್ನೂ ಕುಮಾರಧಾರೆಯ ಮಹಿಮೆಯನ್ನೂ ಹೊಗಳಿ, ಕೃತಕೃತ್ಯರಾದರು."

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಆರನೆಯ ಅಧ್ಯಾಯವು ಮುಗಿದುದು ‖ ೬ ‖

---

# ಅಥ ಸಪ್ತಮೋಽಧ್ಯಾಯಃ

ಶ್ರೀಸೂತ ಉವಾಚ– ಪುನರಸ್ಯ ಪ್ರವಕ್ಷ್ಯಾಮಿ ಸುಬ್ರಹ್ಮಣ್ಯಸ್ಯ ವೈಭವಮ್ । ಚತುರ್ವರ್ಣೇಷು ವಿಖ್ಯಾತಂ ಭುಕ್ತೇರ್ಮುಕ್ತೇಶ್ಚ ಕಾರಣಮ್ ॥ ೧ ॥ ಸುಬ್ರಹ್ಮಣ್ಯೇ ವೇದವಿದಃ ಕ್ಷತ್ರಿಯಾ ಯುದ್ಧ ಕೋವಿದಾಃ । ವೈಶ್ಯಾಃ ಪ್ರವಾಲಭೂಯಿಷ್ಠಾ ಮುಕ್ತಾದಾಮಭಿ-ರಾವೃತಾಃ॥೨॥ ಶೂದ್ರಾಃಫಲೇಕ್ಷು ಧಾನ್ಯಾನಾಂ ಕೃಷಿಕರ್ಮಭಿರಾರ್ಜಕಾಃ। ಲೋಹಾಢ್ಯಾಲೋಹಕಾರಾಶ್ಚ ಕುಲಾಲಾಃ ಪಾತ್ರಕಾರಕಾಃ॥೩॥ ಕಂದಮೂಲಫಲಾದೀನಾಂ ತಾಮ್ರಾದೀನಾಂ ತಥೈವ ಚ।ಹರಿಣಾದಿಪಶೂನಾಂಚ ಚಮರೀವಾಲಸಂತತೇಃ ॥ ೪ ॥ ಪಟ್ಟವಲ್ಕಲಚೇಲಾನಾಂ ಕಂಬಲಾನಾಂ ತಥೈವ ಚ । ಯವಾದಿಮಾಷಚಣಕಮುದ್ಗಶ್ಯಾಮಾಕ ಸಂತತೇಃ ॥೫॥ ಗಂಧಚೂರ್ಣಾದಿವಸ್ತೂನಾಂ ಕ್ರಯವಿಕ್ರಯತತ್ಪರಾಃ। ವಿಧವಾ ಗಣಿಕಾ ಮುಖ್ಯಾಹ್ಯನೇಕಾಸ್ತತ್ರ ಸಂತಿ ಹಿ ॥೬॥ ಪತಿತಾಶ್ಚೋಪಸೇವಂತೇ ತಂ ದೇವಂ ಜಗದೀಶ್ವರಮ್ । ಮೃಣ್ಮಯಾನಾಂ ಚ ತಾಮ್ರಾಣಾಂ—ಕಾಂಸ್ಯ ಪಿತ್ತಲಸಂತತೇಃ ॥೭॥ ಅಯಸಾಂ ತ್ರಪುಸೀ-

---

ಸೂತರೆಂದರು— "ಮರಳಿ ಸುಬ್ರಹ್ಮಣ್ಯನ ಮಹಿಮೆಯನ್ನು ಹೇಳುವೆನು. ಆ ಮಹಿಮೆಯು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ಜಾತಿಗಳಲ್ಲಿ ಪ್ರಸಿದ್ಧವಾದುದು. ಭುಕ್ತಿ-ಮುಕ್ತಿಗಳಿಗೆ ಹೇತುವಾದುದು. ಸುಬ್ರಹ್ಮಣ್ಯಕ್ಷೇತ್ರದಲ್ಲಿ ವೇದಜ್ಞರಾದ ಬ್ರಾಹ್ಮಣರು, ಯುದ್ಧಚತುರರಾದ ಕ್ಷತ್ರಿಯರು, ಹವಳ ಮುತ್ತು ವ್ಯಾಪಾರಿಗಳಾದ ವೈಶ್ಯರು, ಕೃಷಿಮಾಡುವ ಶೂದ್ರರು, ಕಮ್ಮಾರರು, ಕುಂಬಾರರು, ಗೆಡ್ಡೆಗೆಣಸು ಹಣ್ಣುಗಳನ್ನೂ, ತಾಮ್ರ ಮೊದಲಾದುವುಗಳನ್ನೂ, ಜಿಂಕೆ ಮೊದಲಾದ ಪಶುಗಳನ್ನೂ, ಚಮರೀಮೃಗದ ಚೌರಿಗಳನ್ನೂ, ಪಟ್ಟೆ ನಾರುಬಟ್ಟೆ ಕಂಬಳಿಗಳನ್ನೂ, ಯವ-ಉದ್ದು--ಕಡಲೆ-ಹೆಸರು–ಸಾವೆಅಕ್ಕಿ ಮೊದಲಾದುವುಗಳನ್ನೂ, ॥ ೫ ॥ ಗಂಧ, ಪರಿಮಳದ ಪುಡಿ ಮೊದಲಾದ ವಸ್ತುಗಳನ್ನೂ ಮಾರತಕ್ಕವರು, ವಿಧವೆಯವರು, ಅನೇಕರು ವೇಶ್ಯೆಯರು ಕೂಡ ಅಲ್ಲಿರುವರು. ಜಾತಿಭ್ರಷ್ಟರೂ ಅಲ್ಲಿ ಸುಬ್ರಹ್ಮಣ್ಯನನ್ನು ಸೇವಿಸುತ್ತಿರುವರು. ಮಣ್ಣಿನ ಪಾತ್ರ, ತಾಮ್ರ, ಕಂಚು, ಹಿತ್ತಾಳಿ ಪಾತ್ರ

ಸಾನಾಂ ಕ್ರಯವಿಕ್ರಯಕಾರಿಣಃ । ತತ್ರ ತತೋೀಪವಿಷ್ಟಾಸ್ತೇ ಹ್ಯನ್ಯೋನ್ಯಂ ಚ ವಿನೋದತಃ ॥ ೮ ॥ ತತ್ತೀರೇ ತಸ್ಯ ಪರಿತಃ ಸುಬ್ರಹ್ಮಣ್ಯಸ್ಯ ಸೇವಕಾಃ ।ಕುಮಾರಧಾರಾತೀರ್ಥೇ ತು ಉಭಯತ್ರ ಸಮಾಸ್ಥಿತಾಃ ॥ ೯ ॥ ತೇ ಸರ್ವೇ ತತ್ರ ಸಂಹೃಷ್ಟಾಃ ಪುತ್ರೈಃ ಪೌತ್ರೈಸ್ಸಮಾವೃತಾಃ। ಕಲತ್ರಭ್ರಾತೃಸಹಿತಾಃ ಮಾತೃಬಂಧುಭಿರಾವೃತಾಃ॥೧೦॥ ಸರ್ವೇ ಚ ಭಕ್ತಿಯುಕ್ತಾಶ್ಚ ವಿನಿಮಜ್ಜಂತಿ ತಜ್ಜಲೇ । ಅನ್ನಂ ಚತುರ್ವಿಧಂ ಭುಕ್ತ್ವಾ ಗಾನಂ ಕುರ್ವಂತಿ ಯೋಷಿತಃ ॥೧೧॥ ಪ್ರಭಾತೇ ಪ್ರತ್ಯಹಂ ಪ್ರಾಪ್ಯ ಚತುರ್ವೇದಪರಾಯಣಾಃ । ಸ್ತೋತ್ರಪಾಠಂ ಪಕುರ್ವಂತಿ ಗಾನಂ ಕುರ್ವಂತಿ ಗಾಯಕಾಃ ॥೧೨॥ ಏತತ್ಪ್ರಕಾರೇಣ ಸದಾ ವರ್ತಂತೇ ಭಜಕಾ ನರಾಃ । ದಧ್ಯನ್ನಂ ಕ್ಷೀರಮೃಷ್ಟಾನ್ನಂ ಸೂಪಾನ್ನಂ ಸೋಪದಂಶಕಮ್ ॥೧೩॥ ಮಧು ಸರ್ಪಿರ್ಯವಾಗೂಶ್ಚ ಭುಂಜತೇ ಸ್ವೇಚ್ಛಯಾ ಜನಾಃ । ಪ್ರಾತರ್ಮಧ್ಯಾಹ್ನ ಸಾಯಾಹ್ನೇ ಯೇ ಕುರ್ವಂತಿ ಪ್ರದಕ್ಷಿಣಮ್ ॥ ೧೪ ॥ ಕುಮಾರಧಾರಾಸ್ನಾನಂ ಚ ಮುಚ್ಯಂತೇ ಸರ್ವಪಾತಕೈಃ । ತತ್ರಸ್ಥಮೃತ್ತಿಕಾಲೇಪಾತ್ಕುಷ್ಠವ್ಯಾಧಿ-

---

ಕಬ್ಬಿಣ, ತವರ, ಸೀಸಪಾತ್ರೆಗಳನ್ನು ಮಾರತಕ್ಕವರೂ ಕೂಡ ಅಲ್ಲಲ್ಲಿ ಕುಳಿತು ಪರಸ್ಪರ ವಿನೋದದಿಂದ ದೇವಸ್ಥಾನದ ಸುತ್ತಲೂ ಸುಬ್ರಹ್ಮಣ್ಯನ ಸೇವಕರಾಗಿರುವರು. ಅವರೆಲ್ಲರೂ ಮಕ್ಕಳು, ಮೊಮ್ಮಕ್ಕಳು, ಹೆಂಡಿರು, ಸೋದರರು, ಮಾತೃಬಂಧುಗಳು ಇವರೊಡನೆ ॥ ೧೦ ॥ ಭಕ್ತಿಯಿಂದ ಕುಮಾರಧಾರೆಯಲ್ಲಿ ಮಿಂದು, ದೇವರ ಪ್ರಸಾದವನ್ನು ಸೇವಿಸಿ, ಸುಖವಾಗಿರುವರು. ಸ್ತ್ರೀಯರು ದೇವರ ಗಾನವನ್ನು ಹಾಡುತ್ತಲಿರುವರು. ಬ್ರಾಹ್ಮಣರು ಬೆಳಿಗ್ಗೆ ನಾಲ್ಕು ವೇದಗಳನ್ನೂ ಸ್ತೋತ್ರಗಳನ್ನೂ ಪಠಿಸುವರು. ಗಾಯಕರು ಹಾಡುವರು. ಈ ರೀತಿಯಿಂದ ಸೇವಕರು ಭಜಿಸುತ್ತ, ದಧ್ಯನ್ನ ಅಥವಾ ಹಾಲನ್ನ, ತೊವ್ವೆಯನ್ನು, ಫಲಗಳು, ಜೇನು, ತುಪ್ಪ, ಗಂಜಿ ಮುಂತಾದವುಗಳನ್ನು ತಮ್ಮಿಷ್ಟದಂತೆ ಭೋಜನ ಮಾಡುತ್ತಾರೆ. ಪ್ರತಿದಿನ ಮೂರು ಹೊತ್ತು ಯಾರು ಪ್ರದಕ್ಷಿಣೆ ಮಾಡಿ ಕುಮಾರಧಾರೆಯಲ್ಲಿ ಸ್ನಾನ ಮಾಡುತ್ತಾರೋ, ಅವರು ಸರ್ವ ಪಾಪಮುಕ್ತರಾಗುವರು. ಆ ದೇವರ ಸ್ಥಳದ ಮೃತ್ತಿಕೆ ಹಚ್ಚಿಕೊಂಡರೆ, ಕುಷ್ಠವ್ಯಾಧಿ ಭಗಂದರ ರೋಗಗಳಿಂದ ಮುಕ್ತ

ಭಗಂದರೈಃ ॥೧೫॥ ಮುಚ್ಯಂತೇ ತೀರ್ಥವಾಸಾಚ್ಚ ಸರ್ವೇ ವಿಗತ ಕಲ್ಮಷಾಃ ॥೧೬॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯ ಕ್ಷೇತ್ರಪುರಾಣೇ
ಸಪ್ತಮೋಽಧ್ಯಾಯಃ ॥ ೭ ॥

---

## ಅಥ ಅಷ್ಟಮೋಽಧ್ಯಾಯಃ

---

ಶ್ರೀಸೂತ ಉವಾಚ–ಪುನರನ್ಯಂ ಪ್ರವಕ್ಷ್ಯಾಮಿ ಸುಬ್ರಹ್ಮಣ್ಯಸ್ಯ ವೈಭವಮ್ । ಯಚ್ಛ್ರುತ್ವಾ ಮುಚ್ಯತೇ ಜಂತುರ್ಭವರೋಗಾದ್ಯುಪದ್ರವಾತ್ ॥೧॥ ಶೃಣ್ವಂತು ಮುನಯಃ ಸರ್ವೇ ಸತ್ಯಮುಕ್ತಂ ಶಿವೇನ ತು। ಪಾರ್ವತ್ಯೈ ಸರ್ವಪಾಪಘ್ನಂ ಶ್ರೋತೃಣಾಮಘನಾಶನಮ್ ॥೨॥ ಋಷಯ ಊಚುಃ–ಭೋ ಸೂತ ತವ ಸದ್ವಾಕ್ಯಂ ಶ್ರುತ್ವಾ ಚ ಮುದಿತಾ ವಿಭೋ। ಪಾರ್ವತೀಂ ಪ್ರತಿ ಶಂಭುಶ್ಚ ಕಿಮಾಹ ಚ ವದಸ್ವ ನಃ ॥೩॥ ವಯಂ ಶ್ರುತ್ವಾ ಕೃತಾರ್ಥಾಃ ಸ್ಮಃ ಸೂತಪೌರಾಣಿಕೋತ್ತಮ ॥೪॥ ಶ್ರೀಸೂತ ಉವಾಚ–ಪುರಾ ಶಿವೋ ಮಹಾದೇವ್ಯೈ ಪ್ರಾಹ

---

ರಾಗುವರು. ಕುಮಾರಧಾರೆಯ ಬಳಿ ವಾಸಮಾಡಿದುದರಿಂದ ಕೂಡ ಪಾಪ ಮುಕ್ತರಾಗುವರು" ॥ ೧೬ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಏಳನೆಯ ಅಧ್ಯಾಯವು ಮುಗಿದುದು ॥ ೭ ॥

---

ಸೂತರೆಂದರು— "ಭಕ್ತರ ಸಂಸಾರಪೀಡೆಯನ್ನೇ ಪರಿಹರಿಸುವ ಇನ್ನೊಂದು ಮಹಿಮೆಯನ್ನು ಹೇಳುವೆನು. ಕೇಳಿದವರ ಪಾಪವನ್ನು ಕಳೆಯುವ ಈ ಕಥೆಯನ್ನು ರುದ್ರದೇವರು ಪಾರ್ವತಿಗೆ ಹೇಳಿರುವರು." ಋಷಿಗಳು—"ಸೂತನೆ! ಆ ಪಾರ್ವತೀಶಂಕರ ಸಂವಾದ ಕಥೆಯನ್ನು ಹೇಳು. ಅದನ್ನು ಕೇಳಿ ಧನ್ಯರಾಗುವೆವು" ಎನ್ನಲು, ಸೂತರೆಂದರು— "ರುದ್ರದೇವರು

ಸರ್ವಾತ್ಮಕಃ ಪ್ರಭುಃ । ಶಿವ ಉವಾಚ–ಶತಬಿಂದೋಃ ಶೃಣುದಂತಂ ಪುರಾ ಕಾವಮೌರಪರ್ವತೇ ॥೫॥ ಮುನಿಶ್ಚಾಸೀನ್ಮಹಾಪ್ರಾಜ್ಞಃ ಸರ್ವಜ್ಞಾನದಯಾನಿಧಿಃ । ಸಮಾಧ್ಯಷ್ಟಾಂಗಯೋಗೇನ ಧ್ಯಾಯನ್ನಾತ್ಮಾನಮಾತ್ಮವಿತ್ ॥೬॥ ಧ್ಯಾನೇನಾಹು ಪ್ರತುಷ್ಟಶ್ಚ ದತ್ತವಾನ್ ವರಮುತ್ತಮಮ್ । ತ್ರಿಕಾಲಜ್ಞಾನಸಾಮರ್ಥ್ಯಂ ನಿತ್ಯಾನುಷ್ಠಾನಕರ್ಮಣಿ॥೭॥ ಇತ್ಯೇವಮುಪದಿಷ್ಟಸ್ಸನ್ ಸುಬ್ರಹ್ಮಣ್ಯೋ ದಯಾನಿಧಿಃ। ವಟುರೂಪಂ ಸಮಾಸಾದ್ಯ ಸದಾ ಬುದ್ಧಿಜಿತೇಂದ್ರಿಯಃ॥೮॥ ಪಾದುಕಾಛತ್ರದಂಡಾದಿತಾಪಸೋಚಿತಭೂಷಣಃ । ಉತ್ತರಿಯೋಪವೀತಾಢ್ಯೋ ದರ್ಭಪಾಣಿಶ್ಚ ವಾಗ್ಯತಃ ॥ ೯ ॥ಮೌನೀ ಪ್ರಸಾದಸುಮುಖೋ ವ್ಯವಹಾರಪರಾಙ್ಮುಖಃ । ಬದ್ಧಪದ್ಮಾಸನೊ ಭಕ್ತ್ಯಾ ಹ್ಯಕ್ಷಮಾಲಾಯುತಸ್ಸದಾ ॥೧೦॥ ತೌಲವಾಹ್ವಯ ದೇಶೇ ತು ಋಷ್ಯಶೃಂಗಾದ್ರಿಸನ್ನಿಧೌ। ಪಶ್ಚಿಮೇ ತುಸ್ಥಿತೋ ನಿತ್ಯಂ ಪೂರ್ವಾಭಿಮುಖತಃ ಸ್ವಯಮ್॥೧೧॥ ಬಹುಕಾಲ ತಥಾ ಭೂತ್ವಾ ವಟುರೂಪೋ ಮಹಾಮತಿಃ । ಅಷ್ಟಾಂಗಯೋಗಮಾಲಂಬ್ಯ ಅಣಿಮಾದಿಗುಣೈರ್ಯುತಃ॥೧೨॥ಜಪಿತ್ವಾ ಬ್ರಹ್ಮಗಾಯತ್ರೀಂ

---

ಪಾರ್ವತಿಗೆ ಹೇಳಿದರು— "ದೇವಿಯೆ! ಶತಬಿಂದುವಿನ ವೃತ್ತಾಂತವನ್ನು ಕೇಳು. ಪೂರ್ವದಲ್ಲಿ ಕುಮಾರಪರ್ವತದಲ್ಲಿ ॥ ೫ ॥ ಜ್ಞಾನಸಂಪನ್ನನಾದ ಆ ಮುನಿಯು ಅಷ್ಟಾಂಗಯೋಗದಿಂದ ಪರಮಾತ್ಮನನ್ನು ಧ್ಯಾನಿಸುತ್ತಿದ್ದನು. ನಾನು ಆತನ ಧ್ಯಾನಕ್ಕೆ ಮೆಚ್ಚಿ ಶ್ರೇಷ್ಠ ವರವನ್ನಿತ್ತೆನು. ನಿತ್ಯ ಕರ್ಮಾಚರಣೆಯಲ್ಲಿ ತ್ರಿಕಾಲಜ್ಞಾನಶಕ್ತಿಯನ್ನು ಆತನಿಗೆ ಕೊಟ್ಟೆ"ನೆಂಬ ಕಥೆಯನ್ನು ಸುಬ್ರಹ್ಮಣ್ಯನಿಗೆ ಉಪದೇಶಿಸಲು, ಆತನು ಬ್ರಹ್ಮಚಾರಿರೂಪವನ್ನು ಧರಿಸಿ, ಇಂದ್ರಿಯಗಳನ್ನು ವಶಪಡಿಸಿ ತಪಸ್ವಿಗಳಿಗೆ ಯೋಗ್ಯವಾದ ಪಾದುಕೆ-ಛತ್ರ-ದಂಡ ಮೊದಲಾದುವುಗಳನ್ನೂ ಯಜ್ಞೋಪವೀತ-ಉತ್ತರೀಯಗಳನ್ನೂ, ದರ್ಭೆಗಳನ್ನೂ ಧರಿಸಿ, ಮೌನವ್ರತದಿಂದ ಲೋಕವ್ಯವಹಾರಗಳನ್ನು ತೊರೆದು, ಪದ್ಮಾಸನದಲ್ಲಿ ಕುಳಿತು ಅಕ್ಷರಮಾಲೆಯನ್ನು ಧರಿಸಿ, ॥ ೧೦ ॥ ತೌಳವದೇಶದಲ್ಲಿರುವ ಋಷ್ಯಶೃಂಗಾಶ್ರಮದ ಬಳಿ ಪಶ್ಚಿಮದಲ್ಲಿ ತಾನು ಪೂರ್ವಾಭಿಮುಖನಾಗಿ, ಅಷ್ಟಾಂಗಯೋಗನಿರತನಾಗಿ, ಅಣಿಮಾದ್ಯಷ್ಟಸಿದ್ಧಿಗಳಿಂದ ಕೂಡಿ, ಬ್ರಹ್ಮಗಾಯತ್ರೀ ಮಂತ್ರವನ್ನು ಜಪಿಸುತ್ತ, ಬ್ರಹ್ಮಸೂತ್ರಗಳನ್ನು ಪಠಿಸುತ್ತ

ತ್ರಿಷದಾಂ ವೇದಮಾತರಮ್ । ನಿಯಮಾಂಶ್ಚ ಸಮಾತಿಷ್ಠನ್ ಬ್ರಹ್ಮ ಸೂತ್ರಯುತಸ್ಸದಾ॥೧೩॥ ಏವಂ ಹಿ ಧ್ಯಾನನಿಷ್ಠಸ್ಯ ಶಿವಃ ಪ್ರತ್ಯಕ್ಷತಾಂ ಗತಃ । ಪರಿತುಷ್ಟೋಽಸ್ಮಿ ತೇ ವತ್ಸ ವರಂ ವರಯ ಸುವ್ರತ ॥ ೧೪ ॥ ತವೇಪ್ಸಿತಂ ವರಂ ದಾಸ್ಯೇ ಸಂಶಯಂ ತ್ಯಜ ವೇಗತಃ । ಇತ್ಯುಕ್ತಃ ಶಂಭುನಾ ತತ್ರ ವಟುರೂಪಧರಃ ಸದಾ॥೧೫॥ ಅಹಮತ್ರ ವಸಾಮ್ಯೇವ ನೈಷ್ಠಿಕಬ್ರಹ್ಮಚರ್ಯಯಾ । ಕಲ್ಪಾವಸಾನಪರ್ಯಂತಂ ವಸಾಮಿ ತ್ವತ್ಪ್ರಸಾದತಃ ॥೧೬॥ ತಥಾ ಕುರುಷ್ವ ಸರ್ವಜ್ಞ ಗಾರ್ಹಸ್ಥ್ಯೇನಾಸ್ತಿ ತತ್ಸುಖಮ್ । ಬ್ರಹ್ಮಚರ್ಯೇಣ ಧೈರ್ಯೇಣ ಬ್ರಹ್ಮಾನಂದೋ ಭವೇದ್ಧ್ರುವಮ್ ॥ ೧೭ ॥ ತಾತಾತ್ರ ಸಂಸೃತೌ ಲೋಕೇ ಕಿಂ ಸುಖಂ ವದ ದೇಹಿನಾಮ್ । ಅತೋಽಹಂ ನಿರ್ಗುಣಂ ಬ್ರಹ್ಮ ಧ್ಯಾಯನ್ ಸದ್ಯೋಗಮಾರ್ಗತಃ ॥ ೧೮ ॥ ಶಿವ ಉವಾಚ—ದಕ್ಷಿಣಾಮೂರ್ತಿ ರೂಪೇಣ ಪ್ರೀತೋಽಹಂ ತವ ಸನ್ನಿಧೌ । ತಿಷ್ಠಾಮಿ ತ್ವಂ ತಥಾ ವತ್ಸ ಮಂತ್ರೋಪಾಸ್ತಿಂ ಕುರುಷ್ವ ಭೋಃ ॥೧೯॥ ತತ್ತಥಾ ಮನ್ಮತಾನೀಹ ಸರ್ವೇಷಾಂ ಬೋಧಯನ್ ಸದಾ। ಪ್ರದರ್ಶ್ಯ ದರ್ಪಣೇ ರೂಪಮತ್ರ ಸ್ಥಿತ್ವಾ ಪ್ರಕಾಶಯ ॥೨೦॥ ಇತ್ಯುಕ್ತ್ವಾ ಶಂಭುರತ್ರಾಪಿ ಅಂತರ್ಧಾನಂ

---

ಶಿವಧ್ಯಾನಪರನಾಗಲು, ಶಿವನು ಪ್ರತ್ಯಕ್ಷನಾಗಿ, "ಪುತ್ರನೆ! ನಿನ್ನ ತಪಸ್ಸಿಗೆ ಮೆಚ್ಚಿದೆನು, ಬೇಕಾದ ವರವನ್ನು ಕೇಳು, ಸಂಶಯವನ್ನು ತೊರೆ" ಎನ್ನಲು ಬ್ರಹ್ಮಚಾರಿರೂಪನಾದ ಸ್ಕಂದನು – || ೧೫ || "ದೇವನೇ! ನಾನಿಲ್ಲಿಯೇ ನೈಷ್ಠಿಕ ಬ್ರಹ್ಮಚಾರಿಯಾಗಿ ಕಲ್ಪಾಂತದ ತನಕ ನಿನ್ನ ಅನುಗ್ರಹದಿಂದ ಆವಾಸ ಮಾಡುತ್ತಿರುವೆನು. ಗೃಹಸ್ಥಾಶ್ರಮದಲ್ಲಿ ಸುಖವಿಲ್ಲ, ಬ್ರಹ್ಮಚರ್ಯ ವ್ರತದಿಂದಲೂ ಧೀರತ್ವದಿಂದಲೂ, ಬ್ರಹ್ಮಾನಂದವೇ ಆಗುವುದು. ತಾತನೆ! ಈ ಲೋಕದಲ್ಲಿ ಸಂಸಾರಿಗಳಾದ ಪ್ರಾಣಿಗಳಿಗೆ ಏನು ಸುಖವಿರುವುದು? ಹೇಳು. ಆದುದರಿಂದ ಪ್ರಾಕೃತಗುಣರಹಿತನಾದ ಪರಬ್ರಹ್ಮನನ್ನು ಧ್ಯಾನಿಸುತ್ತಾ ಯೋಗಮಾರ್ಗವನ್ನವಲಂಬಿಸಿಕೊಂಡಿರುವೆನು." ಎನ್ನಲು, ಶಿವನೆಂದನು— "ದಕ್ಷಿಣಾಮೂರ್ತಿ ಎಂದು ಪ್ರಸಿದ್ಧವಾದ ಉಮಾಮಹೇಶ್ವರಾತ್ಮ ಸ್ವರೂಪದಿಂದ ಸಂತುಷ್ಟನಾಗಿ ನಾನು ನಿನ್ನ ಸಮೀಪದಲ್ಲಿರುವೆನು. ಪುತ್ರನೇ! ನೀನು ಹಾಗೆಯೇ ಮಂತ್ರಜಪವನ್ನಾಚರಿಸುತ್ತ, ನನ್ನ ಮತಗಳನ್ನು ಜನರಿಗೆ ಉಪದೇಶಿಸುತ್ತ, ಕನ್ನಡಿಯಂತೆ ನಿರ್ಮಲವಾದ ಮನಸ್ಸಿನಲ್ಲಿ ಬ್ರಹ್ಮಸ್ವರೂಪವನ್ನು ತೋರಿಸಿ, ಈ ಸ್ಥಳದಲ್ಲಿ ನಿಂತು ಪ್ರಕಾಶಪಡಿಸು" || ೨೦ || ಹೀಗೆಂದು ರುದ್ರ

ಗತಃ ಕಿಲ " ೨೧ ॥ ಯದಾ ವಟುತ್ವಮಾಶ್ರಿತ್ಯ ತಪಸ್ತೇಪೇ ಚ ಷಣ್ಮುಖಃ।ತದಾರಭ್ಯಾತ್ರ ಪರಿತೋ ವಲ್ಮೀಕೋ ಜಾಯತೇ ಭೃಶಮ್ ॥ ೨೨ ॥ ತದೇವ ಸ್ವಸ್ಥಲಂ ಕೃತ್ವಾ ಸರ್ಪೋ ಭೂತ್ವಾ ಸುಖಂ ಗುಹಃ । ತಥಾ ಪೂರ್ವಸ್ಥಿತಃ ಶೇಷೋ ವಲ್ಮೀಕೇ ಸಂಪ್ರತಿ ಸ್ಥಿತಃ ॥ ೨೩ ॥ ತದಾ ಪ್ರಭೃತಿ ದೇವೇಶಃ ಸರ್ವೇಷಾಮುಪಕಾರಕೃತ್।ತತ್ರಸ್ಥಾಂಮೃತ್ತಿಕಾಂ ನಿತ್ಯಂ ಲಲಾಟೇ ಧಾರಯಂತಿ ಯೇ ॥೨೪॥ ತೇಷಾಂ ಘೋರಪಿಶಾಚಾದ್ಯಾ ನಶ್ಯಂತೇವ ನ ಸಂಶಯಃ। ತಂ ದೃಷ್ಟ್ವಾ ಯಶ್ಚ ಕಶ್ಚಾಪಿ ನಮಸ್ಕಾರಪ್ರದಕ್ಷಿಣಮ್ ॥ ೨೫ ॥ ಕುರುತೇಮುನಿ ಶಾರ್ದೂಲಾಸ್ತಸ್ಯ ತುಷ್ಟಿರ್ಭವಿಷ್ಯತಿ । ತತ್ರೋಪವಾಸಂ ಯಃ ಕುರ್ಯಾಚ್ಚತುರ್ಥ್ಯಾಂ ಜಾಗರಂ ತಥಾ ॥ ೨೬ ॥ ಪಂಚಮ್ಯಾಂ ವಾಥ ಷಷ್ಠ್ಯಾಂ ವಾ ಕಾಮಾನಿಷ್ಟಾನವಾಪ್ನುಯಾತ್ । ತತ್ರ ಯೋ ವೇದಪಾಠಂ ತು ಶ್ರದ್ಧಾಭಕ್ತಿಸಮನ್ವಿತಃ ॥೨೭॥ ಕರೋತಿ ಬ್ರಾಹ್ಮಣೋ ಯಸ್ತು ತಸ್ಯ ತುಷ್ಟೋ ಭವೇದ್ಗುಹಃ । ;ವೇದಪಾಠನಶೀಲಶ್ಚ ಸಾಕ್ಷಾದ್ಬ್ರಹ್ಮ ಪ್ರಪದ್ಯತೇ ॥ ೨೮ ॥ ಯೋ ಹಸ್ತತಾಲಘಂಟಾದಿದರ್ಪಣಾದೀಂಶ್ಚ

---

ದೇವರು ಅದೃಶ್ಯರಾದರು. ಸುಬ್ರಹ್ಮಣ್ಯನು ಬ್ರಹ್ಮಚಾರಿರೂಪದಿಂದ ತಪಸ್ಸು ಮಾಡಿದಂದಿನಿಂದ ಆ ಸ್ಥಳದಲ್ಲಿ ಸುತ್ತಲೂ ಹುತ್ತವು ದೊಡ್ಡದಾಗಿ ಹುಟ್ಟಿರುತ್ತದೆ. ಷಣ್ಮುಖನು ಆ ಸ್ಥಳವೇ ತನ್ನ ಮೂಲಸ್ಥಾನವೆಂದು ಸರ್ಪಾಕೃತಿಯನ್ನು ಧರಿಸಿ ವಾಸಮಾಡುತ್ತಿದ್ದಾನೆ. ಹಾಗೆಯೇ ಪೂರ್ವದಿಂದ ವಾಸಮಾಡುತ್ತಿದ್ದ ಶೇಷದೇವನು ಈಗಲೂ ಆ ಹುತ್ತದಲ್ಲಿದ್ದಾನೆ. ಆ ಕಾಲ ಮೊದಲ್ಗೊಂಡು ಸುಬ್ರಹ್ಮಣ್ಯನು ಅಲ್ಲಿ ಎಲ್ಲರಿಗೂ ಉಪಕಾರ ಮಾಡುತ್ತಿದ್ದಾನೆ. ಆ ಹುತ್ತದ ಮೂಲಮೃತ್ತಿಕೆಯನ್ನು ಹಣೆಯಲ್ಲಿ ಧರಿಸಿಕೊಂಡವರಿಗೆ ಘೋರ ಪಿಶಾಚಾದಿ ಪೀಡೆಯು ಇರುವುದಿಲ್ಲ. ಆ ಸುಬ್ರಹ್ಮಣ್ಯನನ್ನು ನೋಡಿ, ನಮಸ್ಕಾರ, ಪ್ರದಕ್ಷಿಣೆಗಳನ್ನು ಮಾಡಿದವನಿಗೆ ‖ ೨೫ ‖ ಸಂತೋಷವು ಲಭಿಸುವುದು. ಚತುರ್ಥಿ ಅಥವಾ ಪಂಚಮೀ ಷಷ್ಠೀದಿನಗಳಲ್ಲಿ ಆ ಕ್ಷೇತ್ರದಲ್ಲಿ ಉಪವಾಸವನ್ನೂ ಜಾಗರಣೆಯನ್ನೂ ಮಾಡಿದವನು ಇಷ್ಟಾರ್ಥಗಳನ್ನು ಹೊಂದುವನು. ಭಕ್ತಿಶ್ರದ್ಧೆಗಳಿಂದ ವೇದಪಾಠವನ್ನು ಮಾಡಿದ ಬ್ರಾಹ್ಮಣನು ಸುಬ್ರಹ್ಮಣ್ಯನ ಅನುಗ್ರಹವನ್ನು ಪಡೆಯುವನು. ನಿತ್ಯದಲ್ಲಿಯೂ ವೇದವನ್ನು ಉಪದೇಶಿಸುತ್ತಿರುವವನು ಸಾಕ್ಷಾತ್ ಪರಬ್ರಹ್ಮನನ್ನೇ ಹೊಂದುವನು.

ಸರ್ಷಪಾನ್ । ನಿವೇದಯೇದ್ಬ್ರಹ್ಮಪುರಂ ಗಚ್ಛತೇವ ನ ಸಂಶಯಃ ॥ ೨೯ ॥ ಯೋ ದ್ವಿಜಃ ಕ್ಷತ್ರಿಯೋ ವಾಪಿ ವೈಶ್ಯಶ್ಶೂದ್ರೋಽನ್ಯ ಏವ ಚ । ವಿಪ್ರಾಣಾಂ ಭೋಜನಂ ದತ್ವಾ ಭಕ್ತ್ಯಾ ತತ್ರ ದಿವಂ ವ್ರಜೇತ್ ॥೩೦॥ ಶಂಖದಾನಂ ತತ್ರ ದತ್ವಾ ಭಕ್ತ್ಯಾಸೌ ಪುತ್ರವಾನ್ ಭವೇತ್ । ಘಂಟಾದಾನಂ ಚ ಯಃ ಕುರ್ಯಾದ್ವಾಕ್ಪಟುತ್ವಂ ಚ ಜಾಯತೇ ॥೩೧॥ ದರ್ಪಣಸ್ಯ ಪ್ರದಾನೇನ ಅಂಧತ್ವಂ ಚ ವಿನಶ್ಯತಿ । ಸರ್ಷಪಸ್ಯ ಪ್ರದಾನೇನ ವ್ರಣಾತ್ಸರ್ವಾದ್ವಿಮುಚ್ಯತೇ ॥ ೩೨ ॥ ಶ್ರೀಗಂಧಸ್ಯ ಪ್ರದಾನೇನ ಸುಖೀ ಭವತಿ ಮಾನವಃ । ಯಃ ಪುಷ್ಪಧೂಪವಾಸಾಂಸಿ ಭಕ್ತ್ಯಾ ದಾಸ್ಯತಿ ತಸ್ಯ ಹಿ ॥ ೩೩ ॥ ಸರ್ವಾಭೀಷ್ಟಂ ದದಾತ್ಯೇವ ಸುಬ್ರಹ್ಮಣ್ಯೋ ದಯಾನಿಧಿಃ । ಸುಬ್ರಹ್ಮಣ್ಯಸ್ಯಯಾತ್ರಾಂ ವೈ ನಿಯಮೇನ ಕರೋತಿಯಃ । ಪರದ್ರವ್ಯಂ ಪರಾನ್ನಂ ಚ ತ್ಯಕ್ತ್ವಾ ತ ಗಚ್ಛತಿ ತತ್ಪದಮ್ ॥ ೩೪ ॥

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣೇ
ಅಷ್ಟಮೋಽಧ್ಯಾಯಃ ॥ ೮ ॥

---

ಯಾರು–ತಾಳ–ಘಂಟೆ–ಕನ್ನಡಿ--ಸಾಸಿವೆ ಮೊದಲಾದುವುಗಳನ್ನು ಸುಬ್ರಹ್ಮಣ್ಯನಿಗೆ ಸಮರ್ಪಿಸುವರೋ, ನಿಸ್ಸಂದೇಹವಾಗಿ ಅವರು ಸತ್ಯಲೋಕವನ್ನೇ ಹೊಂದುವರು. ಬ್ರಾಹ್ಮಣನು, ಕ್ಷತ್ರಿಯ, ವೈಶ್ಯ, ಶೂದ್ರ ಇವರಲ್ಲಿ ಯಾರೇ ಆಗಲಿ, ಅಲ್ಲಿ ಭಕ್ತಿಯಿಂದ ಬ್ರಾಹ್ಮಣರನ್ನು ಭೋಜನಮಾಡಿಸಿದರೆ ಸ್ವರ್ಗವನ್ನು ಹೊಂದುವನು. ‖ ೩೦ ‖ ಭಕ್ತಿಯಿಂದ ಆ ಸ್ಥಳದಲ್ಲಿ ಶಂಖದಾನ ಮಾಡಿದವನು ಪುತ್ರನನ್ನು ಪಡೆಯುವನು. ಘಂಟಾದಾನವನ್ನು ಮಾಡಿದವನು ವಚನಶಕ್ತಿಯನ್ನು ಹೊಂದುವನು. ಕನ್ನಡಿಯ ದಾನದಿಂದ ಕುರುಡುತನವು ನಷ್ಟವಾಗುವುದು. ಸಾಸಿವೆಯ ದಾನದಿಂದ ಎಲ್ಲ ಘಾಯ-ಹುಣ್ಣುಗಳೂ ಗುಣಹೊಂದುವುವು. ಶ್ರೀಗಂಧದಾನದಿಂದ ಸುಖವಂತನಾಗುವನು. ಪುಷ್ಪ--ಧೂಪ--ವಸ್ತ್ರಗಳನ್ನು ಭಕ್ತಿಯಿಂದ ಕೊಡುವವನಿಗೆ ಸುಬ್ರಹ್ಮಣ್ಯನು ಸರ್ವಾಭೀಷ್ಟವನ್ನೀಯುವನು. ಪರದ್ರವ್ಯ–ಪರಾನ್ನಗಳನ್ನು ಬಿಟ್ಟು ನಿಯಮದಿಂದ ಸುಬ್ರಹ್ಮಣ್ಯಕ್ಷೇತ್ರದ ಯಾತ್ರೆ ಮಾಡಿದವನು ಕೊನೆಯಲ್ಲಿ ಸುಬ್ರಹ್ಮಣ್ಯನ ಲೋಕವನ್ನೇ ಹೊಂದುವನು" ॥ ೩೪ ‖

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು ‖ ೮ ‖

## ಅಥ ನವಮೋऽಧ್ಯಾಯಃ

ಶ್ರೀಸೂತ ಉವಾಚ–ಪುನರನ್ಯತ್ಪ್ರವಕ್ಷ್ಯಾಮಿ ಸುಬ್ರಹ್ಮಣ್ಯಸ್ಯ
ವೈಭವಮ್ । ಸರ್ವೇಷಾಂ ಪ್ರಾಣಿನಾಂ ಚೈವ ಶ್ರುತಮಾತ್ರಾದ್ವಿ
ಮುಕ್ತಿದಮ್ ॥ ೧ ॥ ಸುಬ್ರಹ್ಮಣ್ಯೋ ಮಹಾದೇವಃ ಸ್ತುತಃ ಸಕಲ
ಪಾರ್ಷದೈಃ । ಸರ್ವೇಷಾಮಿಷ್ಟದೋ ನಿತ್ಯಂ ದಯಾಲುರ್ಭಕ್ತವತ್ಸಲಃ
॥ ೨ ॥ ಯಜ್ಞಕರ್ತಾ ಯಜ್ಞಭೋಕ್ತಾ ಸುಬ್ರಹ್ಮಣ್ಯೋऽತ್ರ
ಗೀಯತೇ । ತ್ರಿವಾರಂ ತಸ್ಯ ನಾಮ್ನಾಂ ಚ ಕೀರ್ತನಂ ತು ಕರೋತಿ
ಯಃ ॥೩॥ ತಸ್ಯ ಸರ್ವಾಣ್ಯರಿಷ್ಟಾನಿ ನಶ್ಯಂತೇವ ಸ ಸಂಶಯಃ ।
ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ವಕ್ತುಂ ಕಲ್ಪಶತೈರಪಿ ॥ ೪ ॥ ಬ್ರಹ್ಮಾ
ಚತುರ್ಮುಖೋ ವಾಪಿ ದಿವಾರಾತ್ರಂ ನ ಹಿ ಕ್ಷಮಃ । ಸ್ನಾತ್ವಾ
ಸುಬ್ರಹ್ಮಣ್ಯತೀರ್ಥೇ ಅಂಗಸೇವಾಂ ಕರೋತಿ ಯಃ ॥ ೫ ॥ ತಸ್ಯ
ಕುಷ್ಠಾದಿ ರೋಗಾಶ್ಚ ಸರ್ವೇ ನಶ್ಯಂತ್ಯಸಂಶಯಮ್ । ಸುಬ್ರಹ್ಮಣ್ಯ
ಪ್ರಸಾದಂ ತು ದಾರಯೇಚ್ಛಿರಸಾ ಸಕೃತ್ ॥ ೬ ॥ ಸರ್ವಪಾಪ
ವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ । ಸುಬ್ರಹ್ಮಣ್ಯಾ

---

ಸೂತರೆಂದರು— "ಎಲ್ಲ ಪ್ರಾಣಿಗಳಿಗೂ ಕೇಳಿದ ಮಾತ್ರದಿಂದ ಮೋಕ್ಷವನ್ನೀಯುವ ಸುಬ್ರಹ್ಮಣ್ಯನ ಇನ್ನೊಂದು ಮಹಿಮೆಯನ್ನು ಹೇಳುವೆನು. ಸುಬ್ರಹ್ಮಣ್ಯನು ಸಮಸ್ತ ಪರಿವಾರ ದೇವತೆಗಳಿಂದ ಸ್ತುತಿಸಲ್ಪಟ್ಟವನಾಗಿ ಸಮಸ್ತರ ಇಷ್ಟಾರ್ಥಗಳನ್ನೀಯತಕ್ಕವನು. ಈ ದಯಾನಿಧಿಯು ಯಜ್ಞವನ್ನು ಮಾಡತಕ್ಕವನು, ಯಜ್ಞಫಲವನ್ನು ಭೋಗಿಸತಕ್ಕವನು. ಮೂರು ಸಲ ಆತನ ನಾಮಗಳನ್ನು ಕೀರ್ತನೆ ಮಾಡಿದವನು ಸರ್ವಾರಿಷ್ಟಗಳನ್ನೂ ನಿವಾರಿಸಿಕೊಳ್ಳುವನು. ಸುಬ್ರಹ್ಮಣ್ಯನ ಮಹಿಮೆಯನ್ನು ನಾಲ್ಕು ಮುಖವುಳ್ಳ ಬ್ರಹ್ಮದೇವನೂ ಕೂಡ ನೂರು ಕಲ್ಪಗಳಲ್ಲಿ ಹಗಲುರಾತ್ರಿ ಹೇಳಿದರೂ ಸಂಪೂರ್ಣ ಹೇಳಲಿಕ್ಕೆ ಸಮರ್ಥನಾಗಲಾರನು. ಸುಬ್ರಹ್ಮಣ್ಯದ ಕುಮಾರಧಾರಾ ತೀರ್ಥದಲ್ಲಿ ಮಿಂದು ಅಂಗಪ್ರದಕ್ಷಿಣೆ ಸೇವೆಯನ್ನು ಮಾಡಿದವನು ॥ ೫ ॥ ನಿಸ್ಸಂದೇಹವಾಗಿ ಕುಷ್ಠ ಮೊದಲಾದ ಸರ್ವರೋಗಗಳನ್ನೂ ಪರಿಹರಿಸಿಕೊಳ್ಳುವನು. ಸುಬ್ರಹ್ಮಣ್ಯನ ಪ್ರಸಾದವನ್ನು ಶಿರಸ್ಸಿನಲ್ಲಿ ಧರಿಸಿದವನು, ಸರ್ವಪಾಪಮುಕ್ತನಾಗಿ ವಿಷ್ಣುಲೋಕವನ್ನು ಹೊಂದುವನು. ಸುಬ್ರಹ್ಮಣ್ಯನ ಮಂದಿರದಲ್ಲಿ ತನ್ನ ಅಂಗಗಳಿಗೆ

ಲಯೋ ಯಸ್ತು ದ್ವಿಜೋಚ್ಛಿಷ್ಟಪ್ರಮಾರ್ಜಕಃ ॥ ೭ ॥ ಅಂಗೈಶ್ಚ ತಸ್ಯ ಪಾಪಾನಿ ನಾಶಮಾಯಾಂತಿ ತತ್ಕ್ಷಣಾತ್ । ಉಚ್ಛಿಷ್ಟೋಪರಿ ಶಾಯಿತ್ವಾ ಕರೋತ್ಯಂಗಪ್ರದಕ್ಷಿಣಮ್ ॥ ೮ ॥ ಕುಷ್ಠವ್ರಣ ಪರೀತಾಂಗೋ ಮುಚ್ಯತೇ ಸರ್ವ ರೋಗತಃ । ಮಹಾಪಾತಕಯುಕ್ತೋ ವಾಯುಕ್ತೋ ವಾ ಬಹುಪಾತಕೈಃ ॥ ೯ ॥ ದೇಹಾಂತೇ ಮುಕ್ತಿಮಾಪ್ನೋತಿ ತಸ್ಯ ಸಂದರ್ಶನಾತ್ತತಃ । ಸುಬ್ರಹ್ಮಣ್ಯಸ್ತವಂ ಮುಖ್ಯಂ ಪ್ರಾತರುತ್ಥಾಯ ಯ ಯಃ ಪಠೇತ್ ॥೧೦॥ ತಸ್ಯ ಸಂಜಾಯತೇಸದ್ಯಃ ಕಾಮಿತಂ ದ್ವಿಜಪುಂಗವಾಃ। ಸುಬ್ರಹ್ಮಣ್ಯಂ ವರಂ ನಿತ್ಯಂ ಬ್ರಹ್ಮಭಾವೇನ ಯೋವಿದನ್ ॥ ೧೦ ॥ ಪರಬ್ರಹ್ಮೇತ್ಯುಪಾಸ್ಯೈವ ಬ್ರಹ್ಮಸಾಯುಜ್ಯಮಾಪ್ನುಯಾತ್ । ಸುಬ್ರಹ್ಮಣ್ಯಂ ಸ್ತುವನ್ನಿತ್ಯಂ ಸ್ತೋತ್ರೈಃ ಸರ್ವಾತ್ಮಕಂ ನರಃ ॥೧೨॥ ಸಾಮ್ರಾಜ್ಯಂ ಭುವಿ ಸಂಪ್ರಾಪ್ಯ ಅಂತೇ ಪರಪದಂ ವ್ರಜೇತ್। ಅಸ್ಮಿನ್ನರ್ಥೇ ಪುರಾವಿಪ್ರಾಃ ಕೃತೇ ತೌಳವದೇಶಕೇ ॥೧೩॥ ದ್ವಿಜಃ ಕಶ್ಚಿದ್ವಸನ್ನಿತ್ಯಂ ಕೇಶವಸ್ವಾಮಿನಾಮವಾನ್ । ಆಸ್ತೇ ಕೃಷಿಪರಸ್ತತ್ರ ತಾಳವಾಹ್ವಯದೇಶಕೇ ॥೧೪॥ ಸದಾ ಧರ್ಮಪರೋ ವಿದ್ವಾನ್ ಧನವಾನ್ ವೇದಪಾರಗಃ । ಏಕಭುಕ್ತವ್ರತಪರೋ ದ್ವಿಜಃ

---

ಬ್ರಾಹ್ಮಣನು ಉಂಡ ಎಂಜಲನ್ನು ಹಚ್ಚಿಕೊಂಡವನ ಪಾಪಗಳೆಲ್ಲವೂ ನಷ್ಟವಾಗುವುವು. ಕುಷ್ಠರೋಗದ ಹುಣ್ಣುಗಳುಳ್ಳವನು ಬ್ರಾಹ್ಮಣರ ಉಚ್ಛಿಷ್ಟದ ಮೇಲೆ ಮಲಗಿ ಅಂಗಪ್ರದಕ್ಷಿಣೆ ಮಾಡಿದರೆ ಸರ್ವರೋಗದಿಂದ ಮುಕ್ತನಾಗುವನು. ಎಂತಹ ಮಹಾ ಪಾತಕಾದಿ ಪಾಪಗಳಿಂದ ಕೂಡಿದವನಾದರೂ ಆ ಸುಬ್ರಹ್ಮಣ್ಯನ ದರ್ಶನಮಾಡಿದರೆ ದೇಹಾವಸಾನದಲ್ಲಿ ಮೋಕ್ಷವನ್ನು ಹೊಂದುವನು. ಮುಂಜಾನೆ ಎದ್ದು ಸುಬ್ರಹ್ಮಣ್ಯಸ್ತೋತ್ರವನ್ನು ಪಠಿಸಿದವನ ॥ ೧೦ ॥ ಇಷ್ಟಾರ್ಥವೆಲ್ಲ ಸಿದ್ಧಿಸುವುದು. ಸುಬ್ರಹ್ಮಣ್ಯನು ಸಾಕ್ಷಾತ್ ಪರಬ್ರಹ್ಮಸ್ವರೂಪನೆಂದು ತಿಳಿದು. ಪರಬ್ರಹ್ಮನೆಂದೇ ಉಪಾಸನೆ ಮಾಡಿದವನು ಆ ಪರಬ್ರಹ್ಮನ ಸಾಯುಜ್ಯಮೋಕ್ಷವನ್ನು ಹೊಂದುವನು. ಸರ್ವಾಂತರ್ಯಾಮಿಯಾದ ಸುಬ್ರಹ್ಮಣ್ಯನನ್ನು ಸ್ತೋತ್ರಗಳಿಂದ ಸ್ತುತಿಸಿದವನು, ಈ ಲೋಕದಲ್ಲಿ ಸಾಮ್ರಾಜ್ಯವನ್ನು ಪಡೆದು ಕೊನೆಗೆ ಮುಕ್ತಿಸ್ಥಾನವನ್ನು ಹೊಂದುವನು. ಈ ವಿಷಯದಲ್ಲಿ ಒಂದು ಕಥೆಯಿದೆ-ಕೃತಯುಗದಲ್ಲಿ ತೌಳವದೇಶದಲ್ಲಿ ಕೇಶವಸ್ವಾಮಿಯೆಂಬ ಬ್ರಾಹ್ಮಣನು ಕೃಷಿಮಾಡುತ್ತ, ವಿದ್ವಾಂಸನೂ ಧನವಂತನೂ ಧರ್ಮಿಷ್ಠನೂ

ಪರಮಶೋಭನಃ॥೧೫॥ ಷಷ್ಠ್ಯಾಂ ವಿಶೇಷತಸ್ತತ್ರ ಹ್ಯೇಕಭುಕ್ತವ್ರತಂ
ಚರನ್ । ಭಕ್ಷ್ಯೈ ಭೋಜ್ಯಾನ್ನಪಾನಾದ್ಯೈರ್ಲೇಹ್ಯಚೋಹ್ಯೋ
ಪದಂಶಕೈಃ॥೧೬॥ ಸಂಪೂಜ್ಯ ಬ್ರಾಹ್ಮಣಾನ್ ಸರ್ವಾನ್ ಗಂಧಪುಷ್ಪಾ
ಕ್ಷತಾದಿಭಿಃ। ತಾಂಬೂಲಾದ್ಯೈಶ್ಚ ಸಂತರ್ಪ್ಯ ಸುಬ್ರಹ್ಮಣ್ಯೇ ಸುಭಕ್ತಿತಃ
॥೧೭॥ ಏವಂ ಚ ಪ್ರತಿಷಷ್ಠ್ಯಾಂ ವೈ ಶುಕ್ಲ ಕೃಷ್ಣಾಖ್ಯಪಕ್ಷಯೋಃ ।
ಏವಂ ತ್ರಿಂಶದ್ವತ್ಸರಂ ತು ವ್ರತಂ ಚಕ್ರೇ ಪ್ರಯತ್ನತಃ ॥೧೮॥ ತಸ್ಯ
ಪ್ರಸನ್ನೋ ಭಗವಾನ್ ಸುಬ್ರಹ್ಮಣ್ಯೋ ದಯಾನಿಧಿಃ । ಸಹಸ್ರದರ್ಪ
ಣೈರ್ಯುಕ್ತೋ ವಟುರೂಪಧರಃ ಸ್ವಯಮ್ ॥೧೯॥ ಬ್ರಹ್ಮಗರ್ಭಃ
ಪ್ರಸನ್ನೋಽಭೂತ್ಕೇಶವಾಖ್ಯದ್ವಿಜಸ್ಯ ತು । ವಟುರೂಪಧರಂ ದೇವಂ
ಕೃಷ್ಣಾಜಿನವಿರಾಜಿತಮ್ ॥ ೨೦ ॥ ದ್ವಾದಶೈರ್ನಾಭಿಭಿರ್ಯುಕ್ತೈ
ರುದ್ರಾಕ್ಷೈಃ ಕೃತಭೂಷಣಮ್ । ಧೃತೋರ್ಧ್ವಪುಂಡ್ರದಂಡಂ ಚ
ಗಾಯತ್ರೀಜಪತತ್ಪರಮ್॥೨೧॥ ತಂ ದೃಷ್ಟ್ವಾ ಸುವಟುಂ ತತ್ರ ದ್ವಿಜಃ
ಕೇಶವನಾಮವಾನ್। ಭಕ್ತ್ಯಾ ಸಮನ್ವಿತೋ ವಿಪ್ರಸ್ತಮಪೃಚ್ಛದ್ವಟುಂ
ಮುದಾ ॥೨೨॥ ತ್ವಂ ವಟೋ ಧರ್ಮ ಏವಾದ್ಧಾ ವಟುರೂಪಧರಃ
ಸ್ವಯಮ್। ಕಸ್ಮಾದ್ದೇಶಾತ್ಸಮಾಯಾತಃ ಕುತ್ರ ಜಾತೋಽಸಿ ಸುವ್ರತಃ

---

ಆಗಿ ಏಕಭುಕ್ತವ್ರತವನ್ನಾಚರಿಸುತ್ತ ॥ ೧೫ ॥ ಷಷ್ಠೀತಿಥಿಯಲ್ಲಂತೂ ವಿಶೇಷ
ವಾಗಿ ಏಕಭುಕ್ತವುಳ್ಳವನಾಗಿ, ಭಕ್ಷ್ಯಭೋಜ್ಯಾದಿಗಳಿಂದಲೂ, ಗಂಧಪುಷ್ಪ
ತಾಂಬೂಲಾದಿಗಳಿಂದಲೂ, ಬ್ರಾಹ್ಮಣರನ್ನು ತೃಪ್ತಿಪಡಿಸುತ್ತ, ಸುಬ್ರಹ್ಮಣ್ಯನಲ್ಲಿ
ದೃಢಭಕ್ತಿಯಿಂದ ಈ ರೀತಿಯಲ್ಲಿ ಪ್ರತಿ ಶುಕ್ಲಪಕ್ಷದ ಷಷ್ಠೀವ್ರತವನ್ನು
ಮೂವತ್ತು ವರ್ಷಗಳಲ್ಲಿ ಮಾಡಿದನು. ಆತನಿಗೆ ಸುಬ್ರಹ್ಮಣ್ಯನು ಪ್ರಸನ್ನ
ನಾಗಿ ಸಹಸ್ರಕನ್ನಡಿಗಳಿಂದ ಕೂಡಿ ಬ್ರಹ್ಮಚಾರಿ ರೂಪದಿಂದ ಪ್ರತ್ಯಕ್ಷ
ನಾದನು. ಆ ಕೇಶವಸ್ವಾಮಿಯು ಕೃಷ್ಣಾಜಿನಧಾರಿಯಾದ ॥ ೨೦ ॥ ಹನ್ನೆ
ರಡು ನಾಭಿಯುಳ್ಳ ರುದ್ರಾಕ್ಷಮಾಲಾಧರನಾದ, ಊರ್ಧ್ವಪುಂಡ್ರವನ್ನೂ
ಧರಿಸಿ, ದಂಡಧಾರಿಯಾಗಿ ಗಾಯತ್ರಿಯನ್ನು ಜಪಿಸುವ ಆ ವಟುರೂಪಿಸ್ಕಂದ
ನನ್ನು ಕಂಡು, ಈ ಭಕ್ತಿಯಿಂದ ವಂದಿಸಿ,-'ಬ್ರಹ್ಮಚಾರಿಯೆ! ಸಾಕ್ಷಾತ್ ಧರ್ಮ
ದೇವತೆಯೇ ವಟುರೂಪಿಯಾಗಿರುವೆ. ಎಲ್ಲಿ ಜನ್ಮವೆತ್ತಿದವನು? ಎಲ್ಲಿಂದ
ಬಂದೆ?' ಎನ್ನಲು ಸ್ಕಂದನು— 'ವೀತಿಹೋತ್ರ (ಅಗ್ನಿ) ನೆಂಬ ಮುನಿಯ
ಪುತ್ರನು ನಾನು; ಕ್ರೌಂಚದಾರಣನೆಂದು ಹೆಸರುಳ್ಳವನು. ಎಲೈ ಬ್ರಾಹ್ಮ

॥ ೨೩ ॥ ವಟುರುವಾಚ—ವೀತಿಹೋತ್ರಮುನೇಃ ಪುತ್ರಃ ಕ್ರೌಂಚ ದಾರಣನಾಮವಾನ್ । ಭೋ ವಿಪ್ರ ಶೃಣು ಮದ್ವಾಕ್ಯಮುಪದೇ ಕ್ಷ್ಯಾಮಿತೇಽನಘ॥೨೪॥ಕರ್ಮಕಾಂಡೇ ಪ್ರವೃತ್ತಸ್ಯ ಜ್ಞಾನಮಾರ್ಗಂ ಪ್ರದರ್ಶಯೇ । ಕೇಶವ ಉವಾಚ-ಜ್ಞಾನಂ ಕಿಂ ವದ ಸರ್ವಜ್ಞ ತೇನ ಕಿಂ ಜಾಯತೇ ಪುನಃ ॥ ೨೫ ॥ ವಟುರುವಾಚ-ಜ್ಞಾನೇನ ಚ ಭವೇನ್ಮುಕ್ತಿಃ ಸರ್ವಸ್ಮಾದಧಿಕಂ ಫಲಮ್। ಯದ್ಯತ್ಕರ್ಮ ಕರೋಷಿ ತ್ವಂ ಸ್ನಾನಂ ದಾನಂ ಚ ತರ್ಪಣಮ್ ॥೨೬॥ ಸರ್ವಂ ವಿಶ್ವಾರ್ಪಣಂ ಕುರ್ಯಾಃ ನಿತ್ಯಂ ಭಜ ಸುರೇಶ್ವರಮ್ । ಪ್ರಸನ್ನಃ ಪುಂಡರೀಕಾಕ್ಷೋ ಮುಕ್ತಿದಾಯೀ ಭವಿಷ್ಯತಿ ॥ ೨೭ ॥ ತಸ್ಮಾತ್ತ್ವಂ ಚ ಸಮಾಸೇವ್ಯ ಮುಕ್ತಿಮಾರ್ಗಂ ಭಜಸ್ವ ಹಿ। ಇತ್ಯುಕ್ತ್ವಾ ತಂ ದ್ವಿಜವರಂ ತತ್ರೈವಾಂತ ರಧೀಯತ॥೨೮॥ತತಃ ಕೇಶವನಾಮಾ ತು ಷಣ್ಮುಖಸ್ಯೋಪದೇಶತಃ। ತ್ರಿಕಾಲಂ ಹರಿಮಾರಾಧ್ಯ ಮುಕ್ತಿಮಾಪ ಸುಭಕ್ತಿತಃ । ತಸ್ಮಾಚ್ಚ ಮುನಯಸ್ಸರ್ವೇ ಸ್ತುತ್ವಾ ಮುಕ್ತಾ ಭವಂತಿ ಹಿ ॥ ೨೯ ॥

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ನವಮೋಽಧ್ಯಾಯಃ ॥ ೯ ॥

---

ಣನೆ! ನನ್ನ ಮಾತನ್ನು ಕೇಳು. ಕರ್ಮಕಾಂಡ ಪ್ರಕಾರ ನಡೆಯುವ ನಿನಗೆ ಜ್ಞಾನಮಾರ್ಗವನ್ನು ತೋರಿಸುವೆನು' ಎನ್ನಲು ಕೇಶವನೆಂದನು—'ಎಲೈ ಸರ್ವಜ್ಞನೆ! ಜ್ಞಾನವೆಂದರೆ ಯಾವುದು? ಅದರ ಫಲವೇನು? ॥ ೨೫ ॥ ಬ್ರಹ್ಮಚಾರಿಯೆಂದನು— 'ಜ್ಞಾನದಿಂದ ಮೋಕ್ಷವು ಲಭಿಸುವುದು. ಈ ಮೋಕ್ಷವು ಸರ್ವ ಫಲಗಳಿಗಿಂತಲೂ ಮಿಗಿಲಾದುದು. ಸ್ನಾನ-ದಾನ-ತರ್ಪಣ ಮೊದಲಾದ ಏನೇನು ಕರ್ಮಗಳನ್ನಾಚರಿಸುವೆಯೋ, ಅದನ್ನೆಲ್ಲವನ್ನು ವಿಶ್ವನೆನಿಸಿದ ಪರಮಾತ್ಮನಲ್ಲಿ ಸಮರ್ಪಿಸು. ಆ ಭಗವಂತನನ್ನು ನಿತ್ಯ ದಲ್ಲಿಯೂ ಭಜಿಸು. ಈ ಜ್ಞಾನಮಾರ್ಗದಿಂದ ಬಿಳಿದಾವರೆಯಂತಹ ನೇತ್ರ ಗಳುಳ್ಳ ಆ ಪರಮಾತ್ಮನು ಮೋಕ್ಷವನ್ನೀಯುವನು. ಆದುದರಿಂದ ಆ ಪುಂಡರೀಕಾಕ್ಷನನ್ನು ಚೆನ್ನಾಗಿ ಭಜಿಸಿ ಮೋಕ್ಷಮಾರ್ಗವನ್ನು ಸೇವಿಸು' ಹೀಗೆಂದು ಆ ದೇವನು ಅಲ್ಲಿಯೇ ಅದೃಶ್ಯನಾದನು. ಆ ಕೇಶವಸ್ವಾಮಿಯು ಸುಬ್ರಹ್ಮಣ್ಯನ ಉಪದೇಶದಿಂದ ತ್ರಿಕಾಲದಲ್ಲಿ ಶ್ರೀ ಹರಿಯನ್ನು ಭಕ್ತಿಯಿಂದ ಸೇವಿಸಿ, ಮೋಕ್ಷವನ್ನು ಹೊಂದಿರುವನು. ಆದಕಾರಣ ಆ ದೇವರನ್ನು ಸ್ತುತಿಸಿ ಮೋಕ್ಷವನ್ನು ಹೊಂದುವರು' ॥ ೨೯ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಒಂಭತ್ತನೆಯ ಅಧ್ಯಾಯವು ಮುಗಿದುದು ॥ ೯ ॥

## ಅಥ ದಶಮೋಽಧ್ಯಾಯಃ

ಶ್ರೀ ಸೂತಉವಾಚ-ಪುನರ್ವಕ್ಷ್ಯಾಮಿ ಭೋ ವಿಪ್ರಾಃ ಸುಬ್ರಹ್ಮಣ್ಯಸ್ಯ ವೈಭವಮ್ । ಅತ್ಯಾಶ್ಚರ್ಯಕರಂ ಕರ್ವ ಸರ್ವೇಷಾಂ ಚ ಮನೋಹರಮ್ ॥೧॥ ಹರಿಶ್ಚಂದ್ರೋ ಮಹಾರಾಜಃ ಶಾಪಾನ್ಮುಕ್ತಃ ಪುರಾ ಕಿಲ । ನಲಸ್ತತ್ರ ತಪಃ ಕೃತ್ವಾ ದಮಯಂತೀಮವಾಪ್ತವಾನ್ ॥ ೨ ॥ ತಸ್ಯ ಪ್ರಸಾದಾಲ್ಲೋಕೇಽಸ್ಮಿನ್ ಪುಣ್ಯಶ್ಲೋಕೋಽಭವತ್ಪುನಃ । ರಾಜಾನಸ್ತು ಮಹಾತ್ಮಾನಃ ಪುರುಕುತ್ಸಃ ಪುರೂರವಾಃ ॥ ೩ ॥ ಅಶ್ವತ್ಥಾಮಾದಯಸ್ಸರ್ವೇ ಸಪ್ತ ತೇ ಸ್ಥಿರಜೀವನಃ । ತಸ್ಯ ಪೂಜಾಂ ತು ಕೃತ್ವಾ ತತ್ಸ್ತೋತ್ರೈಸ್ತನ್ನಾಮಕೀರ್ತನೈಃ ॥ ೪ ॥ ಏಕರಾತ್ರೇಣ ಲಭ್ಯೇತ ಸ್ಥಿರಜೀವಿತ್ವಮೇವ ಚ । ವಿಶ್ವಾಮಿತ್ರೋ ಮುನಿಶ್ರೇಷ್ಠಃ ಸಪ್ತಕೃತ್ವಸ್ತಪಶ್ಚರನ್ ॥ ೫ ॥ ಗಾಯತ್ರ್ಯಾಶ್ಚ ಋಷಿರ್ಭೂತ್ವಾ ಋಷಿತ್ವಂ ಪ್ರಾಪ್ಯ ಕೌಶಿಕಃ । ವಸಿಷ್ಠೋಽಪಿ ಮುನಿಶ್ರೇಷ್ಠಃ ಸತ್ತ್ವಸಂಪನ್ನವಾನಥ ॥ ೬ ॥ ಸುಬ್ರಹ್ಮಣ್ಯಂ ಭಜಿತ್ವಾ ತು ಮುನೀನಾಮಗ್ರಣೀರಭೂತ್ । ಸರ್ವೇ ದೇವಾಸ್ಸಗಂಧರ್ವಾಸ್ಸಿದ್ಧವಿದ್ಯಾಧರಾದಯಃ॥ ೭ ॥ ಮುನಯಶ್ಚಾರಣಾಶ್ಚೈವ ಸಾಧ್ಯಾ ಯಕ್ಷಾಃ ಪುರಾ

---

ಸೂತರೆಂದರು – ಮುನಿಗಳಿರಾ! ಸರ್ವರಿಗೂ ಆಶ್ಚರ್ಯಾನಂದಕರವಾದ ಸುಬ್ರಹ್ಮಣ್ಯನ ಮಹಿಮೆಯನ್ನು ಮರಳಿ ಹೇಳುವೆನು. ಪೂರ್ವದಲ್ಲಿ ಈ ಕ್ಷೇತ್ರದಲ್ಲಿ ತಪಸ್ಸುಮಾಡಿ ಹರಿಶ್ಚಂದ್ರ ಮಹಾರಾಜನು ಶಾಪಮುಕ್ತನಾದನು. ನಳರಾಜನೂ ತಪಸ್ಸುಮಾಡಿ ದಮಯಂತಿಯನ್ನು ಪಡೆದು ಪುಣ್ಯಶ್ಲೋಕನೆನಿಸಿದನು. ಇನ್ನೂ ಮಹಾತ್ಮರಾದ ಪುರುಕುತ್ಸ-ಪುರೂರವ ಮುಂತಾದ ರಾಜರೂ ಉದ್ಧಾರ ಹೊಂದಿದ್ದಾರೆ. ಅಶ್ವತ್ಥಾಮ-ಬಲಿ-ವ್ಯಾಸ-ಹನುಮಾನ್-ವಿಭೀಷಣ-ಕೃಪ-ಪರಶುರಾಮರೆಂಬವರೂ ಇಲ್ಲಿ ತಪಸ್ಸು ಮಾಡಿ ಸ್ಥಿರಜೀವಿಗಳಾದರು. ಸುಬ್ರಹ್ಮಣ್ಯನ ಪೂಜೆ-ಸ್ತೋತ್ರ-ನಾಮಕೀರ್ತನಗಳಿಂದ ಒಂದು ದಿನದಲ್ಲಿಯೇ ಸ್ಥಿರಜೀವತ್ವವು ಲಭಿಸುವುದು. ವಿಶ್ವಾಮಿತ್ರ ಮುನಿಯು ಏಳು ಸಲ ತಪಸ್ಸು ಮಾಡಿ || ೫ || ಗಾಯತ್ರೀ ಮಂತ್ರವನ್ನು ಕಂಡುದರಿಂದ ಆ ಮಂತ್ರಕ್ಕೆ ಮುಖ್ಯ ಋಷಿಯೆನಿಸಿ ಬ್ರಹ್ಮರ್ಷಿಯಾದನು. ಬ್ರಹ್ಮಜ್ಞಾನಿಯಾದ ವಸಿಷ್ಠಮುನಿಯೂ ಸುಬ್ರಹ್ಮಣ್ಯನನ್ನು ಭಜಿಸಿ, ಮುನಿಗಳಿಗೆ ಅಗ್ರಗಣ್ಯನಾದನು. ಸಮಸ್ತ ದೇವತೆಗಳು, ಗಂಧರ್ವ–ಸಿದ್ಧ–ವಿದ್ಯಾಧರಾದಿಗಳು,

ಮುದಾ । ಪಕ್ಷಿಣೋ ಗರುಡಾದ್ಯಾಶ್ಚ ಅಸುರಾ ಬಲಿಪೂರ್ವಕಾಃ ॥೮॥ ಪ್ರಹ್ಲಾದಾದ್ಯಾ ರಾಕ್ಷಸಾಶ್ಚ ವಿಭೀಷಣಪುರೋಗಮಾಃ । ಪರ್ವತೇ ಚ ತಪಸ್ತಪ್ತ್ವಾ ಸ್ವರ್ಗಮೇತೇ ಪ್ರಪೇದಿರೇ ॥೯॥ ಅತ್ರೇದಂ ಪರಮಾಶ್ಚರ್ಯಮಿತಿಹಾಸಂ ವದಾಮಿ ವಃ । ಶೂದ್ರಸ್ಯ ಚರಿತಂ ವಿಪ್ರಾಃ ಸುಬ್ರಹ್ಮಣ್ಯಸ್ಯ ವೈ ಕೃಪಾಮ್ ॥ ೧೦ ॥ ಯತ್ರಸೌವದನಾಮಾಯಃ ಸುಬ್ರಹ್ಮಣ್ಯ ಪ್ರದೇಶಕೇ । ಸ ಚ ಕೃತ್ವಾ ತಥಾರಾಮಮೇಕೋ ವಸತಿ ತತ್ರ ಚ ॥೧೧॥ ಆರಾಮಂ ತತ್ರ ಕೃತ್ವಾ ತು ಕೂಷ್ಮಾಂಡಂ ಸಮವರ್ಧಯತ್ । ಸುಬ್ರಹ್ಮಣ್ಯಸ್ಯ ಸೇವಾರ್ಥಂ ಜನಾಸ್ಸರ್ವೇ ವ್ರಜಂತೀ ಯೇ ॥ ೧೨ ॥ ತತ್ರ ಗತ್ವಾ ವಿಕ್ರಯಂ ಚ ಕರ್ತುಂ ಗೋಶಕಟೇನ ಹಿ । ವಾಹಯಿತ್ವಾ ಫಲಂ ತೇಭ್ಯೋ ವಿಕ್ರೀಯ ಧನಮಗ್ರಹೀತ್ ॥ ೧೩ ॥ ಪ್ರಾರ್ಥಯಿತ್ವಾ ಸ ದೇವೇಶಂ ಕೃತಾಂಜಲಿರಭಾಷತ । ಭೋ ಸ್ವಾಮಿನ್ ದಿಶ ಪುತ್ರಂ ಮೇ ಪ್ರಸೀದ ಕರುಣಾಕರ ॥೧೪॥ ತತಶ್ಚ ದೇವ ಹೇ ಸ್ವಾಮಿನ್ ಸುವರ್ಣಂ ಮುಷ್ಟಿಸಂಯುತಮ್ । ಪ್ರೇಂಖಂ ಕೃತ್ವಾ ರಾಜತೇನ ರಜ್ಜುಂ ಸೌವರ್ಣನಿರ್ಮಿತಾಮ್ ॥೧೫॥ ತತ್ರಪ್ರೇಂಖೇ ತತ್ರ ಸನ್ನ್ಯಸ್ಯ ತವ ಸಂದರ್ಶಯಾಮಿ

---

ಮುನಿಗಳು, ಚಾರಣರು, ಸಾಧ್ಯರು--ಯಕ್ಷರು--ಗರುಡಾದಿ ಪಕ್ಷಿಗಳು, ಪ್ರಹ್ಲಾದ--ಬಲಿ ಮೊದಲಾದ ಅಸುರರು, ವಿಭೀಷಣ ಮೊದಲಾದ ರಾಕ್ಷಸರು, ಈ ಕುಮಾರಪರ್ವತದಲ್ಲಿ ತಪಸ್ಸು ಮಾಡಿ, ಸ್ವರ್ಗಕ್ಕೆ ತೆರಳಿದರು. ಈ ವಿಷಯದಲ್ಲಿ ಆಶ್ಚರ್ಯಕರವಾದ ಚರಿತ್ರೆಯನ್ನು ಹೇಳುವೆನು ॥ ೧೦ ॥ ಸೌವದನೆಂಬ ಶೂದ್ರನು ಸುಬ್ರಹ್ಮಣ್ಯಕ್ಷೇತ್ರದಲ್ಲಿ ಉದ್ಯಾನವನ್ನು ಮಾಡಿಕೊಂಡು ಆವಾಸಮಾಡುತ್ತ ಬೂದಿಗುಂಬಳಕಾಯಿಗಳನ್ನು ಬೆಳೆಯಿಸಿದನು. ಸುಬ್ರಹ್ಮಣ್ಯನ ಯಾತ್ರೆಗೆ ಬಂದ ಜನರಿಗೆ ಅದನ್ನು ಮಾರಲಿಕ್ಕಾಗಿ, ಬಂಡಿಯಲ್ಲಿ ಹೇರಿಕೊಂಡು ಬಂದು ಅವನ್ನು ಮಾರಿ, ಹಣವನ್ನು ಗಳಿಸಿ, ಸುಬ್ರಹ್ಮಣ್ಯನನ್ನು ಕೈಜೋಡಿಸಿ ಪ್ರಾರ್ಥಿಸಿದನು—'ದಯಾಳುವಾದ ಸುಬ್ರಹ್ಮಣ್ಯನೆ! ನನಗೆ ಪುತ್ರನನ್ನು ಕೊಡು ಪುತ್ರನಿತ್ತರೆ ಬೆಳ್ಳಿಯ ತೊಟ್ಟಿಲನ್ನೂ ಚಿನ್ನದ ಸರಪಣಿಯನ್ನೂ ಮಾಡಿಸಿ ॥ ೧೫ ॥ ಒಂದು ಮುಷ್ಟಿ ಚಿನ್ನ (ನಾಣ್ಯ) ವನ್ನು ಅದರೊಳಗಿಟ್ಟು ನಿನಗೆ ಒಪ್ಪಿಸುವೆನು' ಹೀಗೆಂದು ಮನಸ್ಸಿನಲ್ಲಿ ಪ್ರಾರ್ಥಿಸಿ, ಮನೆಗೆ ಬಂದು ತನ್ನ ಹರಿಕೆಯನ್ನು ಪತ್ನಿಗೆ ಹೇಳಿ ಸಂತೋಷ

ಭೋಃ । ಇತಿ ಸಂಪ್ರಾರ್ಥ್ಯ ಮನಸಾ ಅಭಿಗಮ್ಯ ಸ್ವಮಂದಿರಮ್ ॥ ೧೬ ॥ ಪತ್ನೀಂ ಪ್ರತಿ ತದಾ ಪ್ರೋಚ್ಯ ತಾಂ ಪತ್ನೀಂ ಸಮಹರ್ಷಯತ್।ಭರ್ತೃರ್ಯಯುಕ್ತಾ ತು ಸಾನಾರೀ ಶೀಘ್ರಂ ಗರ್ಭಮಧಾರಯತ್ ॥ ೧೭ ॥ ನವ ಮಾಸಾಂತರೇ ಪುತ್ರಂ ಪ್ರಸೂತಾತು ಶುಭವ್ರತಾ । ಆಶೌಚಾಂತೇ ತತಸ್ಸೋಽಥ ಸುತಮಾದಾಯ ವೇಗತಃ॥೧೮॥ಪ್ರೇಂಖಂ ರಜತ ರೂಪಂ ತು ರಜ್ಜ್ವಾ ಚ ಸ್ವರ್ಣರೂಪಯಾ । ಮುಷ್ಟಿ ಸುವರ್ಣಮಾದಾಯ ಸ್ವಾಮಿನಃ ಪದಮಭ್ಯಗಾತ್ ॥ ೧೯ ॥ ತಂ ದೃಷ್ಟ್ವಾ ದೇವ ದೇವೇಶಂ ಪ್ರಣಿಪತ್ಯ ಪುನಃ ಪುನಃ । ಸುಬ್ರಹ್ಮಣ್ಯಂ ಸುಧನ್ಯಾತ್ಮಾ ಸಾಧು ಕರ್ಮ ಚಕಾರ ಸಃ ॥ ೨೦ ॥ ಸ ತು ದೀರ್ಘಾಯುರಾಪನ್ನೋ ಸುರೂಪೀ ಗುಣವಾನ್ ಸುಧೀಃ ಪುತ್ರ ಪೌತ್ರೈಃ ಪರಿವೃತಸ್ತತೋಽಮೋಕ್ಷ ಮವಾಪ್ತವಾನ್ ॥ ೨೧ ॥ ಏತಚ್ಛ್ರುತ್ವಾ ಮಹಾಶ್ಚರ್ಯಂ ಸರ್ವೇ ಪ್ರಾಂಜಲಯಸ್ತದಾ । ಪ್ರಣಿಪತ್ಯ ಪ್ರಾರ್ಥಯಂತಃ ಸುಬ್ರಹ್ಮಣ್ಯಂ ಶಶಂಸಿರೇ ॥ ೨೨ ॥

ಇತಿ ಶ್ರೀ ಸ್ಕಾಂದೇ ಶ್ರೀ ಸುಬ್ರಹ್ಮಣ್ಯ ಕ್ಷೇತ್ರಪುರಾಣೇ
ದಶಮೋಽಧ್ಯಾಯಃ ॥ ೧೦ ॥

---

ಪಡಿಸಿದನು. ಆಕೆಯು ಗರ್ಭವನ್ನು ಧರಿಸಿ, ಒಂಭತ್ತನೆಯ ತಿಂಗಳಲ್ಲಿ ಪುತ್ರನನ್ನು ಹಡೆದಳು. ವೃದ್ಧಿ ಸೂತಕ ಶುದ್ಧವಾದೊಡನೆ, ಆ ಶೂದ್ರನು ಬೆಳ್ಳಿಯ ತೊಟ್ಟಿಲು, ಚಿನ್ನದ ಸರಪಣಿ, ಒಂದು ಮುಷ್ಟಿ ಚಿನ್ನದ ನಾಣ್ಯ ಸಹಿತ ಮಗುವನ್ನು ಸುಬ್ರಹ್ಮಣ್ಯನ ಸನ್ನಿಧಿಗೆ ಕರೆದು ತಂದು ವಂದಿಸಿ, ಮುಂದೆ ಧನ್ಯನಾಗಿ ಸತ್ಕರ್ಮಗಳನ್ನಾಚರಿಸುತ್ತಿದ್ದನು. ॥ ೨೦ ॥ ಆ ಬಾಲಕನು ದೀರ್ಘಾಯುಷ್ಮಂತನಾಗಿ, ಸುಂದರನೂ, ಗುಣವಂತನೂ, ಸಮೃದ್ಧಿವಂತನೂ ಆಗಿ, ಪುತ್ರಪೌತ್ರಾದಿಗಳಿಂದ ಕೂಡಿ, ಇಹಸುಖವನ್ನು ಭೋಗಿಸಿ, ಮೋಕ್ಷವನ್ನು ಪಡೆದನು' ಹೀಗೆ ಸೂತರಿಂದ ಆಶ್ಚರ್ಯ ಮಹಿಮೆಯನ್ನು ಕೇಳಿ, ಮುನಿಗಳೆಲ್ಲರೂ ಕೈಮುಗಿದು ಸುಬ್ರಹ್ಮಣ್ಯನನ್ನು ಪ್ರಾರ್ಥಿಸಿ ಹೊಗಳಿದರು ॥ ೨೨ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು ॥ ೧೦ ॥

---

# ಅಥ ಏಕಾದಶೋಽಧ್ಯಾಯಃ

ಶ್ರೀ ಸೂತಉವಾಚ– ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಪ್ರವಕ್ಷ್ಯಾಮಿ ಸಮಾಸತಃ । ಯಚ್ಛ್ರುತ್ವಾ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥ ೧ ॥ ತೌಳವಾಹ್ವಯದೇಶಸ್ಥಾ ಜನಾಸ್ಸರ್ವೇ ಸಮಾಸತಃ । ಕಷ್ಟಂ ಸಂಪ್ರಾಪ್ಯ ತೇ ತತ್ರ ಭುಕ್ತಿಮುಕ್ತಿಪ್ರದಂ ತದಾ ॥ ೨ ॥ ಸ್ತ್ರಿಯೋ ವಿಲಾಸಸಂಯುಕ್ತಾಃ ಕೇಶಬಂಧಮನೋಹರಾಃ ಕಾಂಚೀದಾಮಾಭಿರಾಮಾಶ್ಚ ಸ್ವರ್ಣಸೂತ್ರಧರಾಸ್ತಥಾ ॥ ೩ ॥ ಚಿತ್ರಕಂಕಣಹಸ್ತಾಶ್ಚ ಪರಸ್ಪರ ವಿನೋದಿಕಾಃ । ತಾಂಬೂಲವಲ್ಲೀಸುದಲಂ ಧೃತ್ವಾಸ್ತಾಃ ಕರಪಲ್ಲವೇ ॥ ೪ ॥ ವಕ್ಷೋಜೋಪರಿವಿನ್ಯಸ್ತಸಿತವಸ್ತ್ರಲವಾಸ್ತಥಾ । ಪುರುಷಾ ಬಾಲವೃದ್ಧಾಶ್ಚ ಶಿರಸ್ಯಾದಾಯ ಬಾಲಕಾನ್ ॥ ೫ ॥ ತಂಡುಲಂ ಫಲತಾಂಬೂಲಕದಲೀಫಲಸಮ್ಮಿತಂ। ಕೂಷ್ಮಾಂಡಾನಿ ಸಧಾನ್ಯಾನಿ ವಾಹಯಿತ್ವಾ ಸಮಾಯಯುಃ ॥ ೬ ॥ ಸ್ನಾತ್ವಾ ಕುಮಾರಧಾರಾಯಾಂ ಸುಬ್ರಹ್ಮಣ್ಯಂ ನಮಂತಿ ತೇ । ದೃಷ್ಟ್ವಾ ತೇ ತತ್ರ ದೇವಂ ಪ್ರಾರ್ಥಯಂತ್ಯಂಬಿಕಾಸುತಂ॥೭॥ತೇಷಾಂ

ಸೂತರೆಂದರು— "ಸಂಸಾರ ಬಂಧವನ್ನೇ ನಿವೃತ್ತಿಗೊಳಿಸುವ ಸುಬ್ರಹ್ಮಣ್ಯ ಮಹಿಮೆಯನ್ನು ಸಂಕ್ಷೇಪದಿಂದ ಹೇಳುವೆನು— ತೌಳವ ದೇಶದಲ್ಲಿದ್ದ ಜನರೆಲ್ಲರೂ ದುರ್ಭಿಕ್ಷಕ್ಕೊಳಗಾದಾಗ ಭುಕ್ತಿಮುಕ್ತಿಯನ್ನೀಯುವ ಸುಬ್ರಹ್ಮಣ್ಯನ ಬಳಿಗೆ ಬಂದು ಸೇರಿದರು. ಅಂದವಾದ ಮುಡಿಗಳೊಡನೆ ವಿಲಾಸವತಿಯರಾದ ಸುಂದರ ಸ್ತ್ರೀಯರು ಟೊಂಕಪಟ್ಟಿ, ಚಿನ್ನದ ಸರ, ತರತರದ ಬಳೆಗಳು ಇವುಗಳಿಂದ ಅಲಂಕೃತೆಯರಾಗಿ, ಕೈಯಲ್ಲಿ ತಾಂಬೂಲದೆಲೆಯನ್ನು ಧರಿಸಿ, ಎದೆಯ ಮೇಲೆ ತೆಳ್ಳಗಾದ ಬಿಳಿವಸ್ತ್ರದ ಸೆರಗನ್ನು ಧರಿಸಿ, ಪರಸ್ಪರ ವಿನೋದ ಮಾಡುತ್ತ ಬಂದರು. ಗಂಡಸರೂ ಬಾಲಕರೂ ವೃದ್ಧರೂ ಮಕ್ಕಳನ್ನು ತಲೆಯ ಮೇಲೆ ಹೊತ್ತುಕೊಂಡು ॥ ೫ ॥ ಅಕ್ಕಿ-ಹಣ್ಣು-ತಾಂಬೂಲ-ಬಾಳೆಹಣ್ಣು-ಬೂದಿಗುಂಬಳ ಮತ್ತು ಧಾನ್ಯಗಳನ್ನು ಹೊರಿಸಿಕೊಂಡು ಬಂದರು. ಅವರೆಲ್ಲರೂ ಕುಮಾರಧಾರೆಯಲ್ಲಿ ಮಿಂದು, ಸುಬ್ರಹ್ಮಣ್ಯನನ್ನು ಕಂಡು ವಂದಿಸಿ, ಪ್ರಾರ್ಥಿಸುತ್ತಿದ್ದರು. ಆ ಜನರ ಮಧ್ಯದಲ್ಲಿ ಒಬ್ಬ ಬ್ರಾಹ್ಮಣನು ಕುರುಡನಾಗಿದ್ದು ಆ ಜನರೊಡನೆ ಬಂದು ಸೇರಿ,

ಮಧ್ಯೇ ದ್ವಿಜಶ್ರೇಷ್ಠಃ ಕೋಽಪಿ ಯಾತ್ರಾಜನೈರ್ಯುತಃ । ಚಕ್ಷುರ್ವಿಹೀನೋ ದೇವೇಶ ಕೃಪಾದೃಷ್ಟ್ಯಾ ತು ಪಾಲಯ ॥ ೮ ॥ ಇತಿ ಸಂಪ್ರಾರ್ಥಯದ್ಭಕ್ತ್ಯಾ ಚಕ್ಷುಸ್ತಸ್ಯ ದದೌ ಪ್ರಭುಃ । ತೇನ ದೃಷ್ಟ್ವಾ ತತ್ರ ವಿಪ್ರೋ ಹರ್ಷೇಣ ಚ ಸಮನ್ವಿತಃ ॥ ೯ ॥ ನಮಸ್ಕರೋಮಿ ದೇವೇಶ ತ್ವಮೇವ ಜಗದೀಶ್ವರಃ । ನಮಾಮಿ ದೇವದೇವೇಶ ಲೋಕನಾಥ ಮಮ ಪ್ರಭೋ ॥ ೧೦ ॥ ಕೃಪಯಾ ತವ ದೇವೇಶ ಚಕ್ಷುಃ ಪ್ರಾದುರಭೂನ್ಮಮ । ತ್ವನ್ನಾಮಕೋ ಬ್ರಹ್ಮಗರ್ಭ ಸಂಭವಾಮಿ ಯುಗೇ ಯುಗೇ ॥ ೧೦ ॥ ಇತ್ಯುಕ್ತ್ವಾ ಸ ದ್ವಿಜಶ್ರೇಷ್ಠಃ ಸ್ವದೇಶಂ ಪ್ರತಿಪ್ರಸ್ಥಿತಃ ॥ ೧೧ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ಏಕಾದಶೋಽಧ್ಯಾಯಃ ॥ ೧೧ ॥

---

'ದೇವಶ್ರೇಷ್ಠನೆ! ನಿನ್ನ ದಯಾದೃಷ್ಟಿಯಿಂದ ಕಾಪಾಡು. ನಾನು ಕಣ್ಣಿಲ್ಲದವನಾಗಿರುವೆನು' ಎಂದು ಭಕ್ತಿಯಿಂದ ಪ್ರಾರ್ಥಿಸಿದ ಆತನಿಗೆ ದೇವನು ಕಣ್ಣನ್ನಿತ್ತನು. ಬ್ರಾಹ್ಮಣನು ಆ ಕಣ್ಣಿನಿಂದ ದೇವರನ್ನು ಕಂಡು ಸಂತುಷ್ಟನಾಗಿ 'ದೇವನೆ! ನಿನಗೆ ನಮಸ್ಕರಿಸುವೆನು. ನೀನೇ ಜಗತ್ಪತಿಯು ॥ ೧೦ ॥ ನಿನ್ನ ಅನುಗ್ರಹದಿಂದ ನನಗೆ ಕಣ್ಣು ಬಂದಿರುತ್ತದೆ. ಪ್ರತಿಯುಗದಲ್ಲಿ ನಿನ್ನ ಸೇವಕನೆಂದು ತಿಳಿಸಲು "ಸುಬ್ರಹ್ಮಣ್ಯ" ಎಂಬ ನಿನ್ನ ಹೆಸರಿನಿಂದ ಹುಟ್ಟುವೆನು' ಎಂದು ಪ್ರಾರ್ಥಿಸಿ ತನ್ನ ದೇಶಕ್ಕೆ ಹೊರಟುಹೋದನು" ॥ ೧೨ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು ॥ ೧೧ ॥

---

## ಅಥ ದ್ವಾದಶೋಽಧ್ಯಾಯಃ

ಋಷಯ ಊಚುಃ–ತೀರ್ಥಾನಿ ತತ್ರ ಕಾಸಾರೋ ಹ್ರದಂ ಕೂಪಂ ಬಿಲಾನಿ ಚ । ಸರ್ವಂ ವದ ಮಮ ತ್ವಂ ಹಿ ಯಚ್ಛ್ರುತ್ವಾ ಮುಕ್ತಿಮಾಪ್ನುಮಃ ॥ ೧ ॥ ಶ್ರೀ ಸೂತ ಉವಾಚ–ಕುಮಾರಪರ್ವತೇ ವಿಪ್ರಾ ವಿದ್ಯತೇ ತೀರ್ಥಜಾಲಕಮ್ । ತಾನಿ ವಕ್ತುಮಹಂ ಶಕ್ತೋ ನ ಭವಾಮಿ ಮುನೀಶ್ವರಾಃ ॥ ೨ ॥ ಕುಮಾರಪರ್ವತಸ್ಯಾಧಸ್ತೀರ್ಥಾನಿ ಚ ವದಾಮ್ಯಹಮ್ । ಕುಮಾರತೀರ್ಥಮಿತಿ ಚ ಪಾಪಶಾಂತಿಕರಂ ಪರಮ್ ॥ ೩ ॥ ಕುಮಾರತೀರ್ಥಮಸ್ತೀಹ ಋಷ್ಯಶೃಂಗಸ್ಯನಾಮಕಮ್ । ರಾಮತೀರ್ಥಂ ಲಸತ್ಯೇವ ಜಾಮದಗ್ನ್ಯತಪಸ್ಥಲೇ ॥ ೪ ॥ ಏತೇಷು ತೀರ್ಥಜಾಲೇಷು ಯೋ ನರಃ ಸ್ನಾನಮಾಚರೇತ್ । ಕ್ರೀಡಂತೇ ತಸ್ಯ ಪಿತರಃ ಸಾನಂದಾಃ ಸ್ವರ್ಗಮಾಪ್ನುಯುಃ ॥ ೫ ॥ ಧೃತ್ವಾ ಮೂರ್ಧ್ನಿ ಪಯೋ ಭಕ್ತ್ಯಾ ಸ್ನಾನಾಶಕ್ತಶ್ಚ ಪ್ರೋಕ್ಷಯನ್ । ತತ್ತೀರ್ಥಸ್ನಾನಪಾನಾಚ್ಚ ಮುಚ್ಯತೇ ಸರ್ವಪಾತಕಾತ್ ॥ ೬ ॥ ಬ್ರಹ್ಮಘ್ನೋ ವಾ ಪಿತೃಘ್ನೋ ವಾ ಉಪಪಾತಕಕರ್ಮಕೃತ್ । ಋಷ್ಯಶೃಂಗಸ್ಯ ತೀರ್ಥೇ ತು

---

ಋಷಿಗಳೆಂದರು–"ಎಲೈ ಸೂತಪುರಾಣಿಕನೇ ಆ ಸುಬ್ರಹ್ಮಣ್ಯದಲ್ಲಿರುವ ತೀರ್ಥಗಳನ್ನೂ, ಸರೋವರವನ್ನೂ, ಮಡುವನ್ನೂ, ಬಾವಿಯನ್ನೂ ಗುಹೆಗಳನ್ನೂ, ವರ್ಣಿಸು ಅದನ್ನು ಕೇಳಿ ಮೋಕ್ಷವನ್ನು ಪಡೆಯುವೆವು" ಸೂತರೆಂದರು— "ಮುನಿಗಳಿರಾ! ಕುಮಾರಾದ್ರಿಯಲ್ಲಿ ಅನೇಕ ತೀರ್ಥಗಳಿವೆ ಅದನ್ನೆಲ್ಲ ನಾನು ಹೇಳಲು ಸಮರ್ಥನಲ್ಲ; ಆದುದರಿಂದ ಆ ಬೆಟ್ಟದ ಕೆಳಗಿರುವ ತೀರ್ಥಗಳನ್ನು ಹೇಳುವೆನು. ಕುಮಾರನು ತಪಸ್ಸು ಮಾಡಿದಲ್ಲಿ ಕುಮಾರತೀರ್ಥವೂ, ಋಷ್ಯಶೃಂಗನ ತಪಃಸ್ಥಳದಲ್ಲಿ ಋಷ್ಯಶೃಂಗ ತೀರ್ಥವೂ, ಭಾರ್ಗವನ ತಪಸ್ಥಳದಲ್ಲಿ ಪರಶುರಾಮತೀರ್ಥವೂ ಇವೆ. ಇವುಗಳಲ್ಲಿ ಸ್ನಾನಮಾಡಿದವನ ಪಿತೃಗಳು ಸಂತುಷ್ಟರಾಗಿ ಸ್ವರ್ಗಕ್ಕೆ ತೆರಳುವರು. ॥ ೫ ॥ ಸ್ನಾನಮಾಡಲು ಅಶಕ್ತನಾದವನು, ಆ ತೀರ್ಥಗಳ ಜಲವನ್ನು ತಲೆಯಲ್ಲಿ ಭಕ್ತಿಯಿಂದ ಪ್ರೋಕ್ಷಿಸಿಕೊಂಡರೆ, ಸರ್ವಪಾಪದಿಂದ ಮುಕ್ತನಾಗುವನು. ಬ್ರಹ್ಮಹತ್ಯೆ–ಮಾತಾಪಿತೃಹತ್ಯೆ ಮಾಡಿದವನು, ಇನ್ನು ಉಪಪಾತಕಗಳನ್ನಾಚರಿಸಿದವನು ಋಷ್ಯಶೃಂಗತೀರ್ಥ ಸ್ನಾನಮಾತ್ರದಿಂದ ಆ ಪಾಪಗಳನ್ನು ಕಳೆದು

ಸ್ನಾನಮಾತ್ರಾದ್ವಿಮುಚ್ಯತೇ ॥ ೭ ॥ ನಾಗತೀರ್ಥೇ ನರಃ ಸ್ನಾತ್ವಾ ಕುಕ್ಕೇಲಿಂಗಂ ಪ್ರಣಮ್ಯ ಚ । ಕುಮಾರಧಾರಾತೀರ್ಥಸ್ಯ ದರ್ಶನಾದ್ಬುದ್ಧಿಮಾಪ್ನುಯಾತ್ ॥ ೮ ॥ ಬಿಲದ್ವಾರಜಲೇ ಸ್ನಾತ್ವಾ ಧನಧಾನ್ಯಯುತೋ ಭವೇತ್ । ಪಂಚಾಕ್ಷರೀಂ ವಾ ಗಾಯತ್ರೀಮಷ್ಟಾಕ್ಷರಮಥಾಪಿ ವಾ ॥ ೯ ॥ ವಾಸುದೇವಸ್ಯ ಗೋಪಸ್ಯ ನೃಸಿಂಹಸ್ಯ ತಥೈವ ಚ । ದುರ್ಗಾಯಾಃ ಭುವನೇಶ್ವರ್ಯಾಃ ಗಣೇಶಸ್ಯ ಚ ಮಂತ್ರಕಾನ್ ॥೧೦॥ ಜಪನ್ ಕುಮಾರಧಾರಾಯಾಂ ಸಗಚ್ಛೇದ್ವಿಷ್ಣುಮಂದಿರಮ್। ಅಷ್ಟಾಕ್ಷರೇಣ ಮಂತ್ರೇಣ ವಿಷ್ಣುಸಾಯುಜ್ಯಮಾಪ್ನುಯಾತ್॥೧೧॥ ಪಂಚಾಕ್ಷರೇಣ ಮಂತ್ರೇಣ ಕೈಲಾಸಂ ಪ್ರಾಪ್ನುಯಾತ್ತತಃ । ಜಪನ್ ಸೌರೇಣ ಮಂತ್ರೇಣ ಸೂರ್ಯಲೋಕಂ ಸ ಗಚ್ಛತಿ ॥ ೧೨ ॥ ಗಾಣಪತ್ಯೇನ ಮಂತ್ರೇಣ ನಾರಸಿಂಹೇನ ಚೈವ ಹಿ । ಜಪಧ್ಯಾನಪರೋ ಮರ್ತ್ಯಃ ಸತ್ಯಲೋಕಂ ವ್ರಜೇದ್ಧ್ರುವಮ್ ॥೧೩॥ ಉತ್ತರೇ ಕರ್ಕಟಿಬಿಲಂ ವಾರಣಾಸೀಪ್ರದರ್ಶನಮ್ । ತತ್ರ ಭಕ್ತ್ಯಾ ನರಃ ಸ್ನಾತ್ವಾ ಕೈಲಾಸಂ ಲೋಕಮಾಪ್ನುಯಾತ್ ॥೧೪॥ ಪಶ್ಚಿಮೇ ಕುಂಜರಬಿಲಂ

---

ಕೊಳ್ಳುವನು. ನಾಗತೀರ್ಥದಲ್ಲಿ ಮಿಂದು ಕುಕ್ಕೇಲಿಂಗಕ್ಕೆ ನಮಸ್ಕರಿಸಿ, ಕುಮಾರಧಾರಾತೀರ್ಥವನ್ನು ಕಂಡಮಾತ್ರದಿಂದ ಸದ್ಬುದ್ಧಿಯನ್ನು ಹೊಂದುವನು. ಬಿಲದ್ವಾರದಲ್ಲಿರುವ ತೀರ್ಥದಲ್ಲಿ ಮಿಂದರೆ ಧನಧಾನ್ಯಗಳನ್ನು ಪಡೆಯುವನು. ಪಂಚಾಕ್ಷರಮಂತ್ರ--ಗಾಯತ್ರೀಮಂತ್ರ--ಅಷ್ಟಾಕ್ಷರ-ವಾಸುದೇವಮಂತ್ರ - ಗೋಪಾಲಕೃಷ್ಣಮಂತ್ರ - ನರಸಿಂಹಮಂತ್ರ - ದುರ್ಗಾಮಂತ್ರ ಭುವನೇಶ್ವರೀ ಮಂತ್ರ-ಗಣಪತಿ ಮಂತ್ರ ॥ ೧೦ ॥ ಈ ಮಂತ್ರಗಳನ್ನು ಕುಮಾರಧಾರೆಯಲ್ಲಿ ಜಪಿಸಿದವನು ವೈಕುಂಠಸ್ಥಾನವನ್ನು ಹೊಂದುವನು. ಅಷ್ಟಾಕ್ಷರ ಮಂತ್ರಜಪದಿಂದ ವಿಷ್ಣುಸಾಯುಜ್ಯವನ್ನೇ ಪಡೆಯುವನು. ಪಂಚಾಕ್ಷರ ಮಂತ್ರಜಪದಿಂದ ಕೈಲಾಸಕ್ಕೆ ತೆರಳುವನು. ಸೂರ್ಯಮಂತ್ರದಿಂದ ಸೂರ್ಯಲೋಕಕ್ಕೆ ತೆರಳುವನು. ಗಣಪತಿ-ನರಸಿಂಹ ಮಂತ್ರಗಳ ಜಪ-ಧ್ಯಾನಗಳಿಂದ ಬ್ರಹ್ಮಲೋಕಕ್ಕೆ ತೆರಳುವನು. ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಉತ್ತರಭಾಗದಲ್ಲಿ ಕರ್ಕಟಬಿಲವೆಂಬ ಗುಹೆಯಿದೆ; ಅದು ಕಾಶಿಗೆ ಹೋಗತಕ್ಕುದ್ದು. ಅಲ್ಲಿರುವ ತೀರ್ಥದಲ್ಲಿ ಮಿಂದರೆ ಕೈಲಾಸಕ್ಕೆ ತೆರಳುವನು. ಪಶ್ಚಿಮದಲ್ಲಿ ನೂರು ಯೋಜನ ವಿಸ್ತೀರ್ಣವಾದ ಕುಂಜರಬಿಲವೆಂಬ ಗುಹೆಯಿದೆ.

ಶತಯೋಜನಮಾಯತಮ್ । ಸಿದ್ಧರ್ಷ್ಯಪ್ಸರಸಃ ಪ್ರೀತ್ಯಾ ತತ್ರ ತಿಷ್ಠಂತಿ ಸರ್ವದಾ ॥ ೧೫ ॥ ಪೂರ್ವೇಽಪ್ಯಾಖುಬಿಲಂ ನಾಮ ತತ್ತದ್ಗುರು ವಿಭೇದತಃ । ತತ್ರ ತಿಷ್ಠಂತಿ ನಾಗಾಸ್ತು ನವಕೋ-ಟ್ಯಯುತಾನಿ ಷಟ್ ॥ ೧೬ ॥ ಸೇತುಬಂಧಗಮಂ ಯಾಮ್ಯೇ ರಾಕ್ಷಸೈರುಪಸೇವಿತಮ್ । ಏವಂ ಬಿಲಂ ಗಿರಿಂ ಜ್ಞಾತ್ವಾ ಯಃ ಕರೋತಿ ಪ್ರದಕ್ಷಿಣಮ್ ॥ ೧೭ ॥ ಭೂಪ್ರದಕ್ಷಿಣಜಂ ಪುಣ್ಯಂ ಸ ಲಭೇನ್ನಾತ್ರ ಸಂಶಯಃ । ತ್ರಿಕೂಟ ಇತಿ ತತ್ರಾಪಿ ನಾನಾಕೂಟವಿಚಿತ್ರಿತಃ ॥೧೮॥ ಶ್ರೀಶೈಲ ಇವಚೋತ್ತುಂಗೋ ಹಿಮಾಢ್ಯೋ ಹಿಮವಾನಿವ।ಗಂಧಮಾದನವತ್ತತ್ರ ಸರ್ವೌಷಧಿ ವಿರಾಜಿತಃ ॥ ಗೋವರ್ಧನಾಖ್ಯಗಿರಿವದ್ಗೋಕುಲೈಃ ಪರಿತೋ ವೃತಃ। ಚಂದ್ರದ್ರೋಣಿರಿವಾಭಾತಿ ಚಂದ್ರಕಾಂತ ಶಿಲಾಯುತಃ ॥೨೦॥ ವಾಯುಶೃಂಗ ಇತಿಖ್ಯಾತೋ ವಾಯುಭಿರ್ವ್ಯಾಪ್ಯ ತಿಷ್ಠತಿ। ಮಹೇಂದ್ರಾದ್ರಿರಿವಾಭಾತಿ ಗುಹಾಭಿರ್ಬಹುಭಿರ್ವೃತಃ॥೨೧॥. ಕಿಷ್ಕಿಂಧಾದ್ರಿರಿವಾಭಾತಿ ಕಪಿಪಕ್ಷಿಭಿರಾವೃತಃ । ಸಿದ್ಧವಿದ್ಯಾಧರೈಶ್ಚಾಪಿ ಸೇವಿತಸ್ತು ಸಮಂತತಃ ॥ ೨೨ ॥ ಉದಯಾದ್ರಿ

---

ಅಲ್ಲಿ ಸಿದ್ಧ-ಮುನಿ-ಅಪ್ಸರ ಸ್ತ್ರೀಯರು ನಿತ್ಯದಲ್ಲಿಯೂ ಇರುತ್ತಾರೆ. ॥ ೧೫ ॥ ಪೂರ್ವಭಾಗದಲ್ಲಿ ಆಖುಬಿಲವೆಂಬ ಗುಹೆಯು ಇದೆ. ಆಯಾ ಗುರುಗಳು ಆವಾಸ ಮಾಡಿದುದರಿಂದ ಈ ಗುಹೆಗಳು ನಾಮಭೇದವನ್ನು ಹೊಂದಿವೆ. ಆಖುಬಿಲದಲ್ಲಿ ತೊಂಭತ್ತಾರು ಕೋಟಿ ಹತ್ತುಸಾವಿರ ಸರ್ಪರು ವಾಸಮಾಡುತ್ತಾರೆ. ದಕ್ಷಿಣದಲ್ಲಿ ರಾಮಸೇತುವಿಗೆ ಹೋಗುವ ಗುಹೆ ಇದೆ. ಅಲ್ಲಿ ರಾಕ್ಷಸರು ವಾಸಮಾಡುತ್ತಾರೆ. ಈ ರೀತಿಯಲ್ಲಿ ಗುಹೆಗಳನ್ನೂ ಗಿರಿಯನ್ನೂ ತಿಳಿದು ಪ್ರದಕ್ಷಿಣೆಮಾಡಿದವನು ಭೂಪ್ರದಕ್ಷಿಣೆಯ ಪುಣ್ಯವನ್ನು ನಿಸ್ಸಂದೇಹವಾಗಿ ಪಡೆಯುವನು. ಅಲ್ಲಿ ಅನೇಕ ಶಿಖರಗಳಿಂದ ಕೂಡಿದ ತ್ರಿಕೂಟವೆಂಬ ಪರ್ವತವಿದೆ. ಅದು ಶ್ರೀಶೈಲದಂತೆ ಅತಿ ಎತ್ತರವಾದುದು; ಹಿಮವತ್ಪರ್ವತದಂತೆ ಹಿಮವುಳ್ಳದ್ದು; ಗಂಧಮಾದನದಂತೆ ಸಮಸ್ತ ಔಷಧಿಗಳಿಂದ ಪೂರ್ಣವಾದುದು. ಗೋವರ್ಧನದಂತೆ ಅನೇಕ ಗೋವುಗಳಿಂದ ಕೂಡಿದುದು. ಚಂದ್ರದ್ರೋಣಿ ಗಿರಿಯಂತೆ ಚಂದ್ರಕಾಂತ ಶಿಲೆಗಳಿಂದ ಕೂಡಿದುದು ॥೨೦॥ ಅಲ್ಲಿಯೇ ವಾಯುಶೃಂಗವೆಂಬ ಪರ್ವತಭಾಗವಿದೆ. ಅದು ಬಹಳ ಗಾಳಿಯಿಂದ ಕೂಡಿದುದು; ಮಹೇಂದ್ರ ಪರ್ವತದಂತೆ ಅನೇಕ ಗುಹೆಗಳಿಂದ ವ್ಯಾಪ್ತವಾದುದು. ಕಿಷ್ಕಿಂಧೆಯಂತೆ ಕಪಿಗಳಿಂದಲೂ, ಪಕ್ಷಿಗಳಿಂದಲೂ, ಸುತ್ತಲೂ

ರಿವಾರಕ್ತಃ ಪ್ರಾತಃ ಸೂರ್ಯೋದಯೇ ಸತಿ । ಅಸ್ತಾದ್ರಿರಿವ ಶೋಭಾವಾನ್ ನಕ್ಷತ್ರಾದಿಭಿರಾವೃತಃ ॥೨೩॥ ಏವಂ ವಿಧಂ ಗಿರಿಂ ದೃಷ್ಟ್ವಾ ನಮಸ್ಕಾರಂ ಕರೋತಿ ಯಃ । ಸರ್ವಪಾಪವಿನಿರ್ಮುಕ್ತಃ ಪುಣ್ಯಲೋಕಂ ಸ ಗಚ್ಛತಿ ॥ ೨೪ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ದ್ವಾದಶೋಽಧ್ಯಾಯಃ ॥ ೧೨ ॥

## ಅಥ ತ್ರಯೋದಶೋಽಧ್ಯಾಯಃ

ಶ್ರೀಸೂತ ಉವಾಚ–ಅತಃ ಪರಂ ಪ್ರವಕ್ಷ್ಯಾಮಿ ಕುಮಾರಸ್ಯ ಗಿರೇಃ ಕಥಾಮ್ । ಯಚ್ಛ್ರುತ್ವಾ ಮುನಯಸ್ಸರ್ವೇ ಆಶ್ಚರ್ಯಂ ಪರಮಾಗತಾಃ ॥ ೧ ॥ ಪುರಾ ದೇವಾಸುರಾಶ್ಚಕ್ರುರ್ಯುದ್ಧಂ ಚೈವ ಪರಸ್ಪರಮ್ । ಜಯಂ ನ ಲಬ್ಧ್ವಾ ದೇವಾಸ್ತು ಸೂರ್ಯಂ ಚಾಥ ಪ್ರತುಷ್ಟುವುಃ ॥ ೨ ॥ ತೈಃ ಸ್ತುತಃ ಸೂರ್ಯದೇವಸ್ತು ವಾಕ್ಯಮೇತ-ದುವಾಚ ಹ । ದೇವಾ ಭುವಂ ಪರಿತ್ಯಜ್ಯ ಗಿರೇರಗ್ರೇತು ಸಂಸ್ಥಿತಾಃ ॥ ೩ ॥

---

ಸಿದ್ಧ-ವಿದ್ಯಾಧರರಿಂದಲೂ ಕೂಡಿದುದು. ಉದಯಪರ್ವತದಂತೆ ಸೂರ್ಯೋದಯಕಾಲದಲ್ಲಿ ಕೆಂಪಾಗಿರುವುದು; ಅಸ್ತಪರ್ವತದಂತೆ ನಕ್ಷತ್ರಾದಿ ಪ್ರಕಾಶಗಳಿಂದ ಕೂಡಿರುವುದು. ಇಂತಹ ಪರ್ವತಕ್ಕೆ ನಮಸ್ಕರಿಸಿದವನು ಸರ್ವಪಾಪಮುಕ್ತನಾಗಿ ಪುಣ್ಯಲೋಕವನ್ನು ಸೇರುವನು" ॥ ೨೪ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು ॥ ೧೨ ॥

---

ಸೂತರೆಂದರು— "ಇನ್ನು ಮುಂದೆ ಕುಮಾರಪರ್ವತದ ಕಥೆಯನ್ನು ಹೇಳುವೆನು. ಈ ಕಥೆಯನ್ನು ಪೂರ್ವದಲ್ಲಿ ಮುನಿಗಳು ಕೇಳಿ ಪರಮಾಶ್ಚರ್ಯವನ್ನು ಹೊಂದಿರುವರು. ಪೂರ್ವದಲ್ಲಿ ದೇವತೆಗಳೂ ಅಸುರರೂ ತಮ್ಮತಮ್ಮೊಳಗೆ ಯುದ್ಧಮಾಡಿಕೊಂಡಾಗ ದೇವತೆಗಳು ಸೋತು ಸೂರ್ಯನಾರಾಯಣನನ್ನು ಸ್ತುತಿಸಿದರು. ಆ ಸ್ತುತಿಗೆ ಪ್ರಸನ್ನನಾದ ಆ ದೇವನು— "ದೇವತೆಗಳಿರಾ! ನೀವು ಭೂಮಿಯನ್ನು ಬಿಟ್ಟು ಪರ್ವತದ ತುದಿಯಲ್ಲಿ

ಯುದ್ಧಂ ಕುರುತ ತೈಸ್ಸಾರ್ಧಂ ತತ್ರ ವೋ ವಿಜಯಂ ಭವೇತ್ ।
ಇತ್ಯುಕ್ತಾಸ್ತೇ ತಥಾ ಚಕ್ರುರಾರುಹ್ಯ ಗಿರಿಮುತ್ತಮಮ್ ॥ ೪ ॥
ಉಪರಿಷ್ಟಾತ್ತದಾ ದೇವಾಶ್ಚಾಗತಾ ಹ್ಯಸುರಾಸ್ತಥಾ । ಅನ್ಯೋನ್ಯಂ
ಯುಯುಧುಸ್ಸರ್ವೇ ಬಾಣಜಾಲೈರ್ಮಹಾಬಲಾಃ ॥ ೫ ॥ ಅಸುರಾ
ನಿರ್ಜಿತಾ ದೇವೈರ್ಗಿರೇರು ಪರಿಸಂಸ್ಥಿತೈಃ। ಪರಾಭೂತಾಸ್ತು ದೈತ್ಯಾಸ್ತೇ
ಯಯುಸ್ಸರ್ವೇ ದಿಶೋ ದಶ ॥ ೬ ॥ ಗಿರೇರಾರೋಹಣೇ ಶಕ್ತಿರಸು-
ರಾಣಾಂ ನ ವಿದ್ಯತೇ । ಇತಿ ತೇಷಾಂ ವರೋ ದತ್ತೋ ದೇವಾನಾಂ
ರವಿಣಾ ತದಾ ॥ ೭ ॥ ತತೋ ದೇವಾ ರವೇಃ ಸ್ತೋತ್ರಂ ಚಕ್ರುಸ್ತೇ
ವಿನಯಾನ್ವಿತಾಃ । ಆದಿತ್ಯಾಯ ನಮಸ್ತೇಽಸ್ತು ಸಹಸ್ರಾಂಶುಮತೇ
ನಮಃ ॥ ೮ ॥ ಯೋಗಿನಾಂ ಧ್ಯಾನಗಮ್ಯಾಯ ನಮಸ್ತೇ ಕರ್ಮ
ಸಾಕ್ಷಿಣೇ। ವಿಶ್ವಕರ್ತ್ರೇ ವಿಶ್ವಭರ್ತ್ರೇ ವಿಶ್ವಭೋಕ್ತ್ರೇ ನಮೋ ನಮಃ
॥ ೯ ॥ ಹಂಸಾಯ ಹಂಸಸೇವ್ಯಾಯ ಹಂಸ ಮೂರ್ತೇ ನಮೋನಮಃ।
ತ್ವತ್ಕಟಾಕ್ಷಾದ್ವಯಂ ತ್ವತ್ರ ಜೀವಿತಾಃ ಸರ್ವತೋಭಯಾತ್ ॥ ೧೦ ॥
ಇತಿ ಸ್ತುತೋ ಮಹಾತೇಜಾ ದೇವೈಸ್ತತ್ರಗಿರಿಂ ಗತಃ। ಮೇಘಗಂಭೀ-
ರಯಾ ವಾಚಾ ಪ್ರಸನ್ನವದನೋಽಬ್ರವೀತ್ ॥ ೧೧ ॥ ಯೂಯಂ

---

ಯುದ್ಧ ಮಾಡಿರಿ. ಆಗ ನಿಮಗೆ ಜಯವಾಗುವುದು' ಎನ್ನಲು ದೇವತೆಗಳು ಶ್ರೇಷ್ಠವಾದ ಕುಮಾರ ಪರ್ವತವನ್ನೇರಿದರು. ಆಗ ಕೆಳಗೆ ಅಸುರರು ಬಂದು ನಿಂತು ಬಾಣಗಳಿಂದ ಯುದ್ಧ ಮಾಡಲು ॥ ೫ ॥ ಬೆಟ್ಟದ ಶಿಖರದಲ್ಲಿರುವ ದೇವತೆಗಳಿಂದ ಅಸುರರು ಸೋಲಿಸಲ್ಪಟ್ಟು, ಹತ್ತು ದಿಕ್ಕುಗಳಿಗೆ ಓಡಿದರು. ದೈತ್ಯರಿಗೆ ಆ ಪರ್ವತವನ್ನೇರುವ ಶಕ್ತಿ ಇಲ್ಲದಿರಲೆಂದು ಸೂರ್ಯನು ವರವನ್ನಿತ್ತುದರಿಂದ ದೇವತೆಗಳು ಜಯಿಸಿದವರಾಗಿ ಸೂರ್ಯದೇವನನ್ನು ಪ್ರಾರ್ಥಿಸಿದರು— "ಸಹಸ್ರ ಕಿರಣಗಳುಳ್ಳ. ಯೋಗಿಗಳಿಂದ ಧ್ಯಾನಿಸಲ್ಪಡುವ, ಜೀವರು ಮಾಡುವ ಕರ್ಮಗಳಿಗೆ ಸಾಕ್ಷಿಯಾದ, ಜಗತ್ತಿಗೆ ಸೃಷ್ಟಿಕರ್ತನೂ, ರಕ್ಷಕನೂ, ಸುಖಸಾರವನ್ನು ಭೋಗಿಸತಕ್ಕವನೂ, ಯತಿಪೂಜ್ಯನೂ, ಹಂಸನೆನಿಸಿದವನೂ ಆದ ಸೂರ್ಯದೇವನೆ. ನಿನಗೆ ವಂದನೆಗಳು ನಿನ್ನ ಕಟಾಕ್ಷದಿಂದ ನಾವೆಲ್ಲರೂ ಸರ್ವಭಯದಿಂದ ರಕ್ಷಿತರಾದೆವು'. ॥ ೧೦ ॥ ಹೀಗೆ ಸ್ತುತಿಸಲು, ದೇವತೆಗಳೊಡನೆ ಆ ದೇವನು ಆ ಪರ್ವತಕ್ಕೆ ಬಂದು, ಮೇಘಗರ್ಜನೆಯಂತಹ ಗಂಭೀರ ಧ್ವನಿಯಿಂದ ನಗುಮುಖದಿಂದ ಹೇಳಿದನು:

ಶೃಣುಧ್ವಂ ಹೇ ದೇವಾ ಗೋಪ್ಯಂ ವಃ ಪ್ರವದಾಮ್ಯಹಮ್ । ವಸತಾತ್ರ ಸ್ವಸ್ಥಚಿತ್ತಾ ಗಿರೇರಗ್ರೇ ಸುರೇಶ್ವರಾಃ॥೧೨॥ದೇವಾ ಊಚುಃ– ತಥಾಸ್ತು ತೇ ರವೇ ಶೈಲೇ ವಯಂ ಶಿಷ್ಯಾಮ ಸರ್ವದಾ।ತದ್ವಾಕ್ಯಶ್ರವಣಾದೇವ ವರದಾನಾತ್ಸದೈವ ಹಿ ॥ ೧೩ ॥ ಇತ್ಯುಕ್ತ್ವಾ ದೇವತಾಸ್ಸರ್ವಾಸ್ತತ್ರತಿಷ್ಠಂತಿ ಹರ್ಷಿತಾಃ । ಯ ಇದಂ ಪ್ರಾತರುತ್ಥಾಯ ರವೇಃ ಸ್ತೋತ್ರಂ ಪಠೇತ್ಪರಮ್ ॥೧೪॥ ದೀರ್ಘಾಯುರ್ವಿಜಯಾರೋಗ್ಯಂ ಭುಕ್ತಿಂ ಮುಕ್ತಿಂ ಚ ವಿಂದತಿ । ಇಮಂ ಗಿರೇಃ ಪ್ರಭಾವಂ ಚ ಯಸ್ತು ವರ್ಣಯತೇ ನರಃ ॥ ೧೫ ॥ ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಮಂ ಪದಮ್ ॥ ೧೬ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ತ್ರಯೋದಶೋಽಧ್ಯಾಯಃ॥ ೧೩ ॥

'ದೇವತೆಗಳಿರಾ! ರಹಸ್ಯವನ್ನು ಹೇಳುವೆನು, ಕೇಳಿರಿ. ಈ ಗಿರಿಯ ಶಿಖರದಲ್ಲಿ ಸುಖವಾಗಿ ವಾಸಮಾಡಿರಿ" ಎನ್ನಲು ದೇವತೆಗಳೆಂದರು—"ದೇವನೆ! ನಾವು ಇಲ್ಲಿ ನಿತ್ಯದಲ್ಲಿಯೂ ನಿನ್ನ ಮಾತಿನಂತೆ ವಾಸಮಾಡುವೆವು." ಹೀಗೆ ದೇವತೆಗಳೆಲ್ಲರೂ ಸಂತೋಶದಿಂದ ಆ ಗಿರಿಯಲ್ಲಿ ವಾಸಮಾಡುತ್ತಲಿದ್ದಾರೆ. ಮುಂಜಾನೆ ಎಚ್ಚತ್ತು, ಈ ಸೂರ್ಯಸ್ತೋತ್ರವನ್ನು ಪಠಿಸಿದವನು ದೀರ್ಘಾಯುಷ್ಯ-ವಿಜಯ-ಆರೋಗ್ಯ-ಸುಖಭೋಗ-ಮುಕ್ತಿಗಳನ್ನು ಹೊಂದುವನು. ಈ ಗಿರಿಯ ಮಹಾತ್ಮ್ಯವನ್ನು ವರ್ಣಿಸಿದವನು ಪಾಪಮುಕ್ತನಾಗಿ ವೈಕುಂಠ ಸ್ಥಾನವನ್ನು ಪಡೆಯುವನು ॥ ೧೬ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು ॥ ೧೩ ॥

## ಅಥ ಚತುರ್ದಶೋಽಧ್ಯಾಯಃ

ಶ್ರೀಸೂತ ಉವಾಚ–ಪುನರನ್ಯಾಂ ಪ್ರವಕ್ಷ್ಯಾಮಿ ಕುಮಾರಸ್ಯ
ಗಿರೇಃ ಕಥಾಮ್ । ಶ್ರೀಪರ್ವತಸ್ಯ ಸದೃಶಃ ಕುಮಾರಃ ಪರ್ವತಃ
ಸ್ಮೃತಃ ||೧|| ಕುಮಾರಪರ್ವತಸ್ಯಾಗ್ರೇ ಋಷಯಸ್ತತ್ರ ತೇ ಸ್ಥಿತಾಃ ।
ಸಾಧ್ಯಾ ದೇವಾಶ್ಚ ಗಂಧರ್ವಾಸ್ತಿಷ್ಠಂತ್ಯಪ್ಸರಸಾದಯಃ ॥ ೨ ॥
ದಕ್ಷಿಣಸ್ಯಾಂ ದಿಶಿ ಸದಾ ಪಿತೃದೇವಗಣಾಃ ಸ್ಥಿತಾಃ । ಪ್ರತೀಚ್ಯಾಂ ದಿಶಿ
ತಿಷ್ಠಂತಿ ಸಿದ್ಧವಿದ್ಯಾಧರಾದಯಃ||೩|| ನಾರದಾದ್ಯಾಶ್ಚ ಮುನಯಸ್ತಿ-
ಷ್ಠಂತಿ ಗಿರಿಮೂರ್ಧನಿ । ಶಂಕರಶ್ಚೇಂದ್ರ ವಹ್ನೀ ಚ ಯಮೋ ವಸತಿ
ನಿರ್ಋತಿಃ ॥ ೪ ॥ ವರುಣೋ ವಾಯುಧನದೌ ಈಶಾನ್ಯಾದಿ-
ಕ್ರಮಾತ್ ಸ್ಥಿತಾಃ । ಚೂತಾಃ ಪ್ಲಕ್ಷಾ ಮಹಾವೃಕ್ಷಾಃ ಶ್ವೇತಾ-
ಶ್ವತ್ಥಾದಯಸ್ತಥಾ ॥ ೫ ॥ ಜಂಬೂನಿಂಬಕದಂಬಾಶ್ಚ ನಾರಿಕೇಲಾದ–
ಯಸ್ತಥಾ । ಶ್ರೀವೃಕ್ಷಪನಸಾದಾಶ್ಚ ವಟೋದುಂಬರನಾಮಕಾಃ||೬||
ನಾರಂಗಮಾತುಲಂಗಾಶ್ಚ ಜಂಬೀರಾ ಅಸನಾದಿಕಾಃ । ಕರವೀರಜಾತಿ-

---

ಸೂತರೆಂದರು — "ಕುಮಾರ ಪರ್ವತದ ಮತ್ತೊಂದು ಕಥೆಯನ್ನು ಹೇಳುವೆನು. ಕುಮಾರ ಪರ್ವತವು ಶ್ರೀ ಪರ್ವತಕ್ಕೆ ಸಮಾನವಾದುದು. ಕುಮಾರ ಪರ್ವತದ ಶಿಖರದಲ್ಲಿ ಋಷಿಗಳು, ಸಾಧ್ಯರು, ದೇವತೆಗಳು, ಗಂಧರ್ವರು, ಅಪ್ಸರಸ್ತ್ರೀಯರು ಮೊದಲಾದವರು ವಾಸಮಾಡುತ್ತಾರೆ. ಈ ಪರ್ವತದ ದಕ್ಷಿಣ ದಿಕ್ಕಿನಲ್ಲಿ ಪಿತೃದೇವತೆಗಳಿರುವರು. ಪಶ್ಚಿಮ ದಿಕ್ಕಿನಲ್ಲಿ ಸಿದ್ಧರು ವಿದ್ಯಾಧರಾದಿಗಳಿರುವರು. ಗಿರಿಯ ಶಿಖರದಲ್ಲಿ ನಾರದಾದಿ ಮುನಿಗಳಿರುವರು. ಈಶಾನ್ಯ ಮೊದಲ್ಗೊಂಡು ಕ್ರಮವಾಗಿ ಶಂಕರನು, ಇಂದ್ರನು, ಅಗ್ನಿಯು, ಯಮನು, ನಿರ್ಋತಿಯು, ವರುಣನು, ವಾಯುವು, ಕುಬೇರನು ಕೂಡ ಇರುವರು. ಮಾವು, ಕಿರುಗೋಳಿ, ಬಿಳಿ ಅಶ್ವತ್ಥ ಮೊದಲಾದ ಮಹಾವೃಕ್ಷಗಳು;|| ೫ ॥ ನೇರಳೆ, ಬೇವು, ಬೈನೆ, ತೆಂಗು, ಬಿಲ್ವ, ಹಲಸು, ಗೋಳಿ ಮರಗಳು; ಅತ್ತಿ, ಕಿತ್ತಳೆ, ಮಾದಳ, ಲಿಂಬೆಗಿಡಗಳು, ಕರವೀರ, ಜಾಜಿ, ಮರಜಾಜಿ, ನಂದಿಬಟ್ಲು ಮೊದಲಾದ ಪುಷ್ಪಗಿಡಗಳು; ಅಗರು-ಚಂದನ ವೃಕ್ಷಗಳು, ಕುಮುದ - ತಾವರೆ - ಸಂಪಿಗೆ, ತುಲಸೀ-ದರ್ಭೆ-ಗಡ್ಡೆಗಳು, ಗರ್ಗ

ಕುಂದನಂದ್ಯಾವರ್ತಾದಯಸ್ತಥಾ ॥೭॥ ಅಗರುಶ್ಚಂದನಶ್ಚೈವ ಕುಮು
ದಂ ಪದ್ಮಚಂಪಕೇ । ತುಲಸೀ ಕುಶಮೂಲಾನಿ ಭೃಂಗಹಾರಿದ್ರುಮೇವ
ಚ ॥೮॥ ಸಂಜೀವನಾದ್ಯೋಷಧಯಃ ಸರ್ವಾ ಏವಾತ್ರ ಸಂತಿ ಹಿ ।
ಏತ್ಯೆರ್ವ್ಯಾಪ್ತೋ ಗಿರಿಸ್ತತ್ರ ಕುಮಾರ ಇತಿ ವಿಶ್ರುತಃ ॥ ೯ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಶ್ಚೈವ ಚ ಸಂಘಶಃ ।ತೇ
ಸರ್ವೇಶಂ ಸಮಾಶ್ರಿತ್ಯ ಸೇವಂತೇ ಪ್ರತಿವತ್ಸರಮ್ ॥೧೦॥ ತತ್ರತ್ಯಾ
ಮುನಯೋ ವಾಪಿ ಪಶವಃ ಪಕ್ಷಿಣಶ್ಚಯೇ । ತೃಣಗುಲ್ಮಲತಾದ್ಯಾಶ್ಚ
ತೇ ಸರ್ವೇ ಪುಣ್ಯಜೀವಿನಃ ॥೧೧॥ ತತ್ತೀರೇ ಜಪಯಜ್ಞಂ ಚ ಬ್ರಹ್ಮ
ಯಜ್ಞಂ ಕರೋತಿ ಯಃ । ಸ ವಾಜಪೇಯಾದಿಫಲಂ ಪ್ರಾಪ್ನೋ-
ತ್ಯೇವ ನ ಸಂಶಯಃ ॥ ೧೨ ॥ ತತ್ತೀರೇ ದೇವಪೂಜಾಂ ಚ ಯಃ
ಕುರ್ಯಾದ್ಭಕ್ತಿ ಸಂಯುತಃ । ಸ್ವರ್ಗಸ್ಥೈಃ ಪಿತೃಭಿಸ್ಸಾರ್ಧಂ ಸ್ವಯಂ
ಮೋಕ್ಷಂ ಚ ವಿಂದತಿ ॥ ೧೩ ॥ ತಸ್ಮಾದುದ್ಭೂತತೀರ್ಥೇ ತು ಸ್ನಾನಂ
ಕುರ್ವಂತಿ ಯೇ ದ್ವಿಜಾಃ । ಗಂಗಾದಿ ಸರ್ವ ತೀರ್ಥೇಷು ಸ್ನಾತಾ
ಏವ ಭವಂತಿ ತೇ ॥೧೪॥ ಕುಮಾರಧಾರಾತೀರ್ಥೇಷು ಪಿತ್ವನುದ್ದಿಶ್ಚ
ತರ್ಪಣಮ್।ಪಿತೄಣಾಂ ಚೈವ ಸರ್ವೇಷಾಂ ತೃಪ್ತಿಃಯೇ ಪ್ರಭವಿಷ್ಯತಿ
॥ ೧೫ ॥ ತತ್ತೀರ್ಥಸ್ನಾನಮಾತ್ರೇಣ ಪಾನೇನ ಪ್ರೋಕ್ಷಣೇನ ಚ ।

---

ಅರಸಿನ ಗಿಡಗಳು, ಸಂಜೀವನ ಮುಂತಾದ ಔಷಧಿಗಳು ಈ ಪರ್ವತದಲ್ಲಿರು
ತ್ತವೆ. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಕೂಡ ತಂಡತಂಡ
ವಾಗಿ ಅಲ್ಲಿ ನಿಂತು ಸುಬ್ರಹ್ಮಣ್ಯನನ್ನು ಪ್ರತಿವರ್ಷದಲ್ಲಿ ಸೇವಿಸುತ್ತಾರೆ.
॥ ೧೦ ॥ ಅಲ್ಲಿರುವ ಮುನಿಗಳು, ಪಶುಗಳು, ಪಕ್ಷಿಗಳು, ಹುಲ್ಲು, ಪೊದರು,
ಬಳ್ಳಿ ಮೊದಲಾದ ಸರ್ವಜೀವಿಗಳು ಪುಣ್ಯಜೀವಿಗಳು. ಆ ಪರ್ವತದ ಬಳಿ
ಯಲ್ಲಿ ಮಂತ್ರಜಪ - ಬ್ರಹ್ಮಯಜ್ಞಾದಿಗಳನ್ನು ಮಾಡಿದವನು ವಾಜಪೇಯ
ಮೊದಲಾದ ಯಜ್ಞಫಲಗಳನ್ನು ಹೊಂದುವನು. ಅಲ್ಲಿ ಭಕ್ತಿಯಿಂದ ದೇವರ
ಪೂಜೆಯನ್ನು ಮಾಡುವವನು ಸ್ವರ್ಗಸ್ಥರಾದ ಪಿತೃಗಳೊಡನೆ ಮೋಕ್ಷವನ್ನು
ಪಡೆಯುವನು. ಆ ಪರ್ವತದಿಂದ ಹುಟ್ಟಿದ ತೀರ್ಥದಲ್ಲಿ ಸ್ನಾನಮಾಡಿದ
ಬ್ರಾಹ್ಮಣರು ಗಂಗಾದಿ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವನ್ನು
ಹೊಂದುವರು. ಕುಮಾರಧಾರಾ ತೀರ್ಥಗಳಲ್ಲಿ ಪಿತೃತರ್ಪಣ ಮಾಡಿದರೆ
ಸರ್ವಪಿತೃಗಳಿಗೂ ತೃಪ್ತಿಯುಂಟಾಗುವುದು. ॥ ೧೫ ॥ ತಿಳಿದು ಅಥವಾ

ಜ್ಞಾನಾಜ್ಞಾನಕೃತಂ ಪಾಪಂ ನಾಶಮಾಯಾತಿ ವೇಗತಃ ॥ ೧೬ ॥ ತದ್ಗಿರೇರುದ್ಗತೇ ತೀರ್ಥೇ ಕುಮಾರಾಖ್ಯೇಮನೋಹರೇ । ಸ್ನಾನ ಮಾತ್ರೇಣ ನಶ್ಯಂತಿ ಚಿತ್ತದೋಷಾಸ್ತು ಸರ್ವಶಃ ॥ ೧೭ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ಚತುರ್ದಶೋಽಧ್ಯಾಯಃ ॥ ೧೪ ॥

---

## ಅಥ ಪಂಚದಶೋಽಧ್ಯಾಯಃ

ಶ್ರೀಸೂತ ಉವಾಚ—ಅತ್ರೈವೋದಾಹರಂತೀಮಮಿತಿ ಹಾಸಂ ಪುರಾತನಮ್।ದ್ರಾವಿಡಸ್ಯ ಚ ಮಾಹಾತ್ಮ್ಯಂ ಶ್ರೋತ್ವಣಾಮಘನಾ-ಶನಮ್॥ ೧ ॥ ಪುರಾ ದ್ರಾವಿಡದೇಶೇ ತು ದ್ವಿಜಃ ಕಶ್ಚಿತ್ಸ ವರ್ತತೇ। ಸ್ವಗ್ರಾಮೇ ಸ್ವಸ್ಯ ಕ್ಷೇತ್ರೇ ತು ಸ್ವದೇಶೇ ಸ ತು ವೈ ಮುನಿಃ ॥ ೨ ॥ ತಸ್ಯ ಚಾಸೀದ್ಗೃಹೇ ಸರ್ಪ ಆಶ್ರಿತಃ ಸಂವ್ಯವಸ್ಥಿತಃ । ತಂ ದೃಷ್ಟ್ವಾ ಕ್ರೋಧವಾನ್ ವಿಪ್ರೋ ದಂಡೇನಾಸೌ ಜಘಾನ ತು ॥ ೩ ॥ ತೇನ

---

ತಿಳಿಯದೆ ಮಾಡಿದ ಪಾಪವು ಕೂಡಲೇ ಆ ತೀರ್ಥಸ್ನಾನ-ಪಾನ-ಪ್ರೋಕ್ಷಣಗಳಿಂದ ನಷ್ಟವಾಗುವುದು. ಆ ಕುಮಾರಧಾರೆಯಲ್ಲಿ ಮಿಂದ ಮಾತ್ರದಿಂದ ಮನಸ್ಸಿನ ಸಮಸ್ತ ದೋಷಗಳೂ ಪರಿಹಾರ ಹೊಂದುತ್ತವೆ" ॥ ೧೭ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು ॥ ೧೪ ॥

---

ಸೂತರೆಂದರು— "ಈ ಸುಬ್ರಹ್ಮಣ್ಯದ ವಿಷಯದಲ್ಲಿ ಕೇಳುವವರ ಪಾಪನಾಶಕವಾದ, ದ್ರಾವಿಡ ದೇಶದ ಬ್ರಾಹ್ಮಣನ ಚರಿತ್ರರೂಪವಾದ ಒಂದು ಇತಿಹಾಸವನ್ನು ಹೇಳುವರು. ಪೂರ್ವದಲ್ಲಿ ದ್ರಾವಿಡ ದೇಶದಲ್ಲಿ ಒಬ್ಬನು ತನ್ನ ಗ್ರಾಮದ ಮನೆಯಲ್ಲಿ ವಾಸಮಾಡುತ್ತಿದ್ದನು. ಆತನ ಮನೆಯಲ್ಲಿ ಒಂದು ಸರ್ಪವು ವಾಸಮಾಡುತ್ತಿದ್ದುದನ್ನು ಕಂಡು, ಸಿಟ್ಟುಗೊಂಡು ಅದನ್ನು

ಪಾಪೇನ ಮಹತಾ ಕುಷ್ಠರೋಗೇಣ ಪೀಡಿತಃ । ತೇನಾಸೌ ಕ್ಲೇಶಿ ತಸ್ತತ್ರ ಮಂತ್ರವಿದ್ಭಿಶ್ಚ ಪಂಡಿತೈಃ ॥ ೪ ॥ ಮಂತ್ರೈಶ್ಚೌಷಧಿಭಿಶ್ಚಾಪಿ ಚಿಕಿತ್ಸಾಂ ಕಾರಿತೋ ದ್ವಿಜಃ॥ ೫ ॥ ನಶಾಂತಿಮಾಯಾತಿ ತತಶ್ಚಿಂತಾ-ಕುಲಿತಮಾನಸಃ।ವಿನಿಶ್ವಸನ್ ಗೃಹೇ ದೀನಃ ಶಯಿತಃ ಸ್ಕಂದಚಿಂತಕಃ ॥೬॥ ತದಾ ತಸ್ಯ ಮನಃ ಪ್ರಾಪ್ಯ ಸ್ವಪ್ನೇಽವಾದೀದಮುಂ ದ್ವಿಜಮ್। ಪೂರ್ವೋಕ್ತವಟುರೂಪೇಣ ಬ್ರಾಹ್ಮಣ ತ್ವಂ ಶೃಣುಷ್ವ ಭೋಃ ॥೭॥ ಸುಬ್ರಹ್ಮಣ್ಯ ಮನುಪ್ರಾಪ್ಯ ತಂ ದೃಷ್ಟ್ವಾ ತ್ವಂ ನಮಸ್ಕುರು । ತದಗ್ರ ತೀರ್ಥೇ ಸ್ನಾನಂ ಚ ಕುರುಷ್ವ ದ್ವಿಜಸತ್ತಮ ॥ ೮ ॥ ತತ್ರಸ್ನಾನಾತ್ತವ ವ್ಯಾಧಿಸ್ಸದ್ಯ ಏವ ವಿನಶ್ಯತಿ । ಏತಚ್ಛ್ರುತ್ವಾ ಮಹಾಶ್ಚರ್ಯಂ ದ್ವಿಜ ಉತ್ಥಾಯ ಸ್ವಪ್ನತಃ ॥ ೯ ॥ ಸುಬ್ರಹ್ಮಣ್ಯಸ್ಯ ಸಾನ್ನಿಧ್ಯಂ ಪ್ರಾಪ್ಯ ದೃಷ್ಟ್ವಾ ಪ್ರಣಮ್ಯ ಚ । ಭೋ ದೇವ ಮಾಮಕೋವ್ಯಾಧಿರ್ನಾಶ-ಮಾಯಾತಿ ಚೇತ್ತದಾ ॥೧೦॥ ಸ್ವಾರ್ಜಿತಂ ಧನಮತ್ಯಂತಂ ತುಭ್ಯಂ ದಾಸ್ಯೇ ಸುರೇಶ್ವರ । ಇತ್ಯುಕ್ತ್ವಾದೌ ದ್ವಿಜಶ್ರೇಷ್ಠೋ ನದ್ಯಾಂ ಸ್ನಾತೋಽಭವತ್ತದಾ ॥೧೧॥ ಏಕವಾರಂ ತತ್ರ ಗತ್ವಾ ಸುಬ್ರಹ್ಮಣ್ಯಸ್ಯ ಸನ್ನಿಧಿಂ।ನಮಸ್ಕೃತ್ಯ ಸ್ಥಿತಸ್ತಸ್ಮಿನ್ ದಿವ್ಯ ದೇಹೋಽಭವತ್ತದಾ॥೧೨॥

---

ಕೋಲಿನಿಂದ ಹೊಡೆದುಕೊಂಡನು. ಆ ಮಹತ್ತಾದ ಪಾಪದಿಂದ ಆತನು ಕುಷ್ಠರೋಗ ಪೀಡಿತನಾಗಲು, ಅನೇಕ ಮಂತ್ರಜ್ಞರೂ ವೈದ್ಯರೂ ಬಂದು ಚಿಕಿತ್ಸೆಮಾಡಿದರೂ ॥ ೫ ॥ ಆ ರೋಗವು ಗುಣವಾಗದಿದ್ದುದನ್ನು ಕಂಡು, ಆ ಬ್ರಾಹ್ಮಣನು ವ್ಯಸನದಿಂದ ನಿಟ್ಟುಸಿರುಬಿಟ್ಟು, ಮನೆಯಲ್ಲಿ ಮಲಗಿ ಕೊಂಡು ಸುಬ್ರಹ್ಮಣ್ಯನನ್ನು ಧ್ಯಾನಿಸುತ್ತಿದ್ದನು. ಆಗ ಆತನ ಸ್ವಪ್ನದಲ್ಲಿ ಸುಬ್ರಹ್ಮಣ್ಯನು ಬ್ರಹ್ಮಚಾರಿ ರೂಪದಿಂದ ತೋರಿ "ಬ್ರಾಹ್ಮಣನೆ! ಕೇಳು. ಸುಬ್ರಹ್ಮಣ್ಯಕ್ಕೆ ಬಂದು ಆ ದೇವನಿಗೆ ವಂದಿಸು; ಆತನಿದಿರಿನ ತೀರ್ಥದಲ್ಲಿ ಸ್ನಾನಮಾಡು. ಅಲ್ಲಿ ಸ್ನಾನ ಮಾಡಿದೊಡನೆಯೆ ನಿನ್ನ ವ್ಯಾಧಿಯು ನಷ್ಟ ವಾಗುವುದು" ಈ ಮಾತನ್ನು ಕೇಳಿ ಬ್ರಾಹ್ಮಣನು ಎಚ್ಚತ್ತು, ಸುಬ್ರಹ್ಮಣ್ಯನ ಸನ್ನಿಧಿಗೆ ಪ್ರಯಾಣ ಮಾಡಿ, ವಂದಿಸಿ, "ದೇವಶ್ರೇಷ್ಠನೆ! ನನ್ನ ವ್ಯಾಧಿಯು ಪರಿಹಾರವಾದರೆ ॥ ೧೦ ॥ ನಾನು ಸಂಪಾದಿಸಿಟ್ಟಿರುವ ದ್ರವ್ಯವನ್ನು ನಿನಗೆ ಸಮರ್ಪಿಸುವೆನು" ಎಂದು ಪ್ರಾರ್ಥಿಸಿ, ಕುಮಾರಧಾರೆಯಲ್ಲಿ ಮಿಂದು, ಸುಬ್ರಹ್ಮಣ್ಯನ ಸನ್ನಿಧಿಗೆ ಬಂದು, ನಮಸ್ಕರಿಸಿದೊಡನೆಯೆ ರೋಗಪರಿಹಾರ ವಾಗಿ ದಿವ್ಯ ದೇಹವನ್ನು ಧರಿಸಿದನು. ಅದರಿಂದ ಸಂತುಷ್ಟನಾದ ಬ್ರಾಹ್ಮ

ತೇನ ಸಂಹೃಷ್ಟಚಿತ್ತೋಽಸೌ ಶೀಘ್ರಂ ಪ್ರಾಪ್ಯ ತದಂತಿಕಮ್ । ತಂ ದೃಷ್ಟ್ವಾ ತು ಮಹಾಶೇಷಂ ಪ್ರಶಸ್ತಶಿಖಿವಾಹನಮ್ ॥೧೩॥ ತವ ಪ್ರಸಾದಾದ್ಭೋಃ ಸ್ವಾಮಿನ್ ದಿವ್ಯದೇಹಮವಾಪ್ತವಾನ್ । ಕೃತಾರ್ಥೋಽಹಂ ಮಹಾದೇವ ಪುತ್ರತ್ವೇ ಮಾಂ ವೃಣೀಷ್ವ ಚ ॥೧೪॥ ಇತಿ ಸಂಪ್ರಾರ್ಥ್ಯ ತತ್ರೈವ ಸ್ವಸ್ಯ ದ್ರವ್ಯಂ ಪ್ರದತ್ತವಾನ್ । ಸರ್ವಸ್ವಂ ತಸ್ಯ ದತ್ವಾ ತು ಕರಸಂಪುಟಿತೋ ದ್ವಿಜ॥೧೫॥ ಮಯಾ ಕೃತಾನಿ ಪಾಪಾನಿ ನಷ್ಟಾನಿ ತವ ದರ್ಶನಾತ್ । ಅಹಮದ್ಯ ಕೃತಾರ್ಥೋಽಸ್ಮಿ ತವ ಕಾರುಣ್ಯಮಾತ್ರತಃ ॥೧೬॥ ಇತ್ಯುಕ್ತ್ವಾಸೌ ದ್ವಿಜಸ್ತತ್ರ ನಮಸ್ಕೃತ್ಯ ಪುನಃ ಪುನಃ । ನಮಸ್ತೇಽಸ್ತು ಮಹಾಶೇಷ ಸ್ತೋತ್ರಂ ಚ ಕೃತವಾಸ್ತದಾ ॥ ೧೭ ॥ ನಮಸ್ತೇ ದೇವದೇವೇಶ ನಮಸ್ತೇ ಧರಣೀಧರ । ಪ್ರದಕ್ಷಿಣತ್ರಯಂ ಕೃತ್ವಾ ಅಂಗೇನಾಸೌ ದ್ವಿಜಸ್ತದಾ ॥ ೧೮ ॥ ತತ್ತೀರ್ಥಸ್ನಾನಮಾರಚ್ಯ ತತ್ಪ್ರಸಾದಂ ಪ್ರಗೃಹ್ಯ ಚ । ತದಗ್ರಸ್ಥನದೀಸ್ನಾನಾತ್ಕೃತಕೃತ್ಯೋಽಭವತ್ತದಾ॥೧೯॥ದ್ವಿಜಃ ಸ್ವದೇಶಂ ಸಂಪ್ರಾಪ್ಯ ಬಂಧುಭಾರ್ಯಾಸುತೈರ್ವೃತಃ । ಕೃಪಾಂ ಸ್ಮೃತ್ವಾ ದ್ವಿಜವರೋ ಬಹುದ್ರವ್ಯಮವಾಪ್ತವಾನ್ ॥೨೦॥ ಷಷ್ಠ್ಯಾಂ ಸ ಏಕಭುಕ್ತಂ ಚ

---

ಣನು, ಬೇಗನೆ ದೇವರ ಸಮೀಪಕ್ಕೆ ಬಂದು, ನವಿಲನ್ನೇರಿರುವ ಶೇಷಾಂಶ ಧಾರಿಯಾದ ಸುಬ್ರಹ್ಮಣ್ಯನನ್ನು ವಂದಿಸಿ—"ಸ್ವಾಮಿಯೆ! ನಿನ್ನ ಅನುಗ್ರಹ ದಿಂದ ದಿವ್ಯ ದೇಹವನ್ನು ಹೊಂದಿ, ಧನ್ಯನಾದೆನು. ನನ್ನನ್ನು ನಿನ್ನ ಪುತ್ರ ನೆಂದು ಅಂಗೀಕರಿಸು" ಎಂದು ಪ್ರಾರ್ಥಿಸಿ, ತನ್ನ ಬೊಗಸೆಯಿಂದ ದ್ರವ್ಯ ವನ್ನೆಲ್ಲ ದೇವರಿಗೆ ಸಮರ್ಪಿಸಿದನು. ‖ ೧೫ ‖ "ನಾನು ಮಾಡಿದ ಪಾಪ ಗಳು ನಿನ್ನ ದರ್ಶನದಿಂದ ನಷ್ಟವಾದುವು. ನಿನ್ನ ದಯೆಯಿಂದಲೇ ನಾನು ಕೃತಾರ್ಥನಾದೆನು. ಮಹಾಶೇಷನೆ! ನಿನಗೆ ನಮಸ್ಕರಿಸುವೆನು" ಎಂದು ಮರಳಿ ಸ್ತುತಿಸಿ, "ಭೂಮಿಯನ್ನು ಹೊತ್ತ ದೇವಶ್ರೇಷ್ಠನೆ! ನಿನಗೆ ವಂದನೆ!" ಎನ್ನುತ್ತ ಮೂರು ಅಂಗಪ್ರದಕ್ಷಿಣೆಗಳನ್ನು ಮಾಡಿ ಅಲ್ಲಿನ ತೀರ್ಥಸ್ನಾನ, ದೇವರ ಪ್ರಸಾದ ಸ್ವೀಕಾರ, ಆ ದೇವರ ಮುಂದಿರುವ ನದೀಸ್ನಾನಗಳಿಂದ ಕೃತ ಕೃತ್ಯನಾಗಿ, ತನ್ನ ದೇಶಕ್ಕೆ ಹಿಂತೆರಳಿ ಬಂದು, ಬಂಧು-ಪತ್ನೀ-ಪುತ್ರರಿಂದ ಕೂಡಿ, ದೇವರ ಕೃಪೆಯನ್ನು ನೆನೆಸಿ, ಆತನ ಅನುಗ್ರಹದಿಂದ ಹೇರಳ ದ್ರವ್ಯ ವನ್ನು ಪಡೆದು, ಷಷ್ಠೀದಿನ ಏಕಭುಕ್ತ ವ್ರತವನ್ನಾಚರಿಸುತ್ತ, ದೇವರಿಗೆ

ಹವಿರ್ಭೋಜನತತ್ಪರಃ । ಭುಕ್ತ್ವಾ ಭೋಗಾನ್ಯಥೇಷ್ಟಂ ಚ ಅಂತೇ ಸ್ವರ್ಗಮವಾಪ ಸಃ ॥ ೨೧ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ಪಂಚದಶೋಽಧ್ಯಾಯಃ॥ ೧೫ ॥

---

## ಅಥಃ ಷೋಡಶೋಽಧ್ಯಾಯಃ

ಶ್ರೀಸೂತ ಉವಾಚ–ಪುನರನ್ಯತ್ರ್ಪವಕ್ಷ್ಯಾಮಿ ಸುಬ್ರಹ್ಮಣ್ಯಸ್ಯ ವೈಭವಮ್ । ಪಾಪಾನಾಂ ಪಾಪನಾಶಾಯ ಪ್ರವಕ್ಷ್ಯಾಮಿ ವಿಶೇಷತಃ ॥ ೧ ॥ ಸುಬ್ರಹ್ಮಣ್ಯಪ್ರದೇಶೇ ತು ತೌಳವಾಹ್ವಯಕೇ ನೃಪಃ । ಸುಬ್ರಹ್ಮಣ್ಯಪ್ರತುಷ್ಟ್ಯರ್ಥಂ ರಾಜಾಜ್ಞಾಧಾರಿಣೋ ಘಟೈಃ ॥ ೨ । ತೈಲಂ ಗೃಹೀತ್ವಾ ವಿಪ್ರಾಣಾಮಭ್ಯಂಗಂ ಕಾರಯಂತಿ ವೈ । ಸ್ವೇಚ್ಛಯಾತ್ರ ಸಮಾಸಾದ್ಯ ಸ್ತ್ರಿಯೋ ಹಾರಿದ್ರಲೇಪನಾಃ ॥ ೩ ॥ ಶಿಶವಶ್ಚೈವ ಪೌಗಂಡಾಃ ಸ್ತ್ರಿಯಶ್ಚ ದ್ವಿಜಸತ್ತಮಾಃ । ಸುಬ್ರಹ್ಮಣ್ಯಸ್ಯ

---

ಸಮರ್ಪಿತವಾದ ಪವಿತ್ರವಾದ ಅನ್ನವನ್ನುಣ್ಣುತ್ತ, ಯಥೇಷ್ಟವಾಗಿ ಈ ಲೋಕದ ಸುಖವನ್ನು ಭೋಗಿಸಿ, ಕೊನೆಯಲ್ಲಿ ಸ್ವರ್ಗವನ್ನು ಸೇರಿದನು" ॥ ೨೧ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು ॥ ೧೫ ॥

---

ಸೂತರೆಂದರು— "ಪಾಪಿಷ್ಠರ ಪಾಪಪರಿಹಾರಕವಾದ ಸುಬ್ರಹ್ಮಣ್ಯನ ಇನ್ನೊಂದು ಮಹಿಮೆಯನ್ನು ಹೇಳುವೆನು. ತೌಳವದೇಶದ ಆ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ರಾಜನ ಅಪ್ಪಣೆಯಿಂದ ರಾಜಸೇವಕರು ಕೊಡಗಳಿಂದ ಎಣ್ಣೆಯನ್ನು ತಂದು ಬ್ರಾಹ್ಮಣರಿಗೆ ತೈಲಾಭ್ಯಂಗವನ್ನು ಮಾಡಿಸುತ್ತಿದ್ದರು. ಇಚ್ಛಾನುಸಾರವಾಗಿ ಅರಸಿನವನ್ನು ಲೇಪಿಸಿಕೊಂಡ ಸ್ತ್ರೀಯರೂ, ಚಿಕ್ಕದೊಡ್ಡ ಬಾಲಕರೂ, ಬ್ರಾಹ್ಮಣೋತ್ತಮರೂ ದೇವರ ಸುತ್ತಲಿರುವ ಅಂಗಣದಲ್ಲಿ ಕುಳಿತು ಉತ್ತಮವಾದ ಅನ್ನ-ತೊವ್ವೆ-ಸೌತೆಕಾಯಿಪಲ್ಯ ॥ ೫ ॥ ತುಪ್ಪ-ಮೊಸರು-ಜೇನು-ಹಾಲು-ಸಕ್ಕರೆ ಪಾಯಸ-ಬೂದಿಗುಂಬಳದ ಪಲ್ಯ,

ಸಾನ್ನಿಧ್ಯೇ ಪರಿತಃ ಪ್ರಾಂಗಣೇ ಸ್ಥಿತಾಃ ॥ ೪ ॥ ಪ್ರಾಕಾರಪರಿತಸ್ತತ್ರ ಉಪವಿಶ್ಯ ನಿರಂತರಮ್। ಶಾಲ್ಯನ್ನಂ ಸೂಪಶಾಕಂ ಚ ಉರ್ವಾರುಕ-ಫಲಂ ತಥಾ ॥೫॥ ಘೃತಂ ದಧಿ ಮಧು ಕ್ಷೀರಂ ಪಾಯಸಂ ಶರ್ಕರಾ-ನ್ವಿತಮ್ । ಕೂಷ್ಮಾಂಡಂ ಕದಲೀಂ ಚೈವ ಸುಸ್ವಾದೂನಿ ತಥೈವ ಚ ॥ ೬ ॥ ತಕ್ರಂ ಲವಣಮಿಶ್ರಂ ಚ ಸೂಪದಂಶಂ ಚ ಪೇಯಕಮ್। ತಥಾ ಲವಣಶಾಕಂ ಚ ಭುಂಜಾನಾಶ್ಚ ಯಥೇಷ್ಟಕಮ್ ॥ ೭ ॥ ಹಸ್ತಪ್ರಕ್ಷಾಲನಂ ಕೃತ್ವಾ ತಾಂಬೂಲಾನಿ ಹ್ಯಭಕ್ಷಯನ್ । ಉಪವಿಶ್ಯ ತಥಾ ಕೇಚಿದ್ಗಾಯಕಾ ಗಾನತತ್ಪರಾಃ ॥ ೮ ॥ ಕದಲೀನಾರಿಕೇಲಾದಿ ಫಲಾನ್ಯನ್ಯಾನಿ ಭೂರಿಶಃ । ವೇದವಾದಂ ಪ್ರಕುರ್ವಂತಿ ಸ್ವರ್ಪಿತಾನ್ನ-ಪ್ರಭೋಜಿನಃ ॥೯॥ ಅಪರೇ ಚ ಸ್ವದೇಶಸ್ಥೈಃ ಸುಜನೈಃ ಸಮಭಾಷ-ಯನ್ । ವಾರ್ತಾಂ ಕೇಚಿಚ್ಚ ಶೃಣ್ವಂತೋ ಮೋದಂತೇ ಸ್ವೇಚ್ಛಯಾ ಜನಾಃ ॥೧೦॥ ಸುಬ್ರಹ್ಮಣ್ಯಸ್ಯ ಸೇವಾಂ ಚ ತೇ ಕುರ್ವಂತಿ ಪ್ರಯ-ತ್ನತಃ।ಸಪ್ತಮ್ಯಂತಮುಪಿಸ್ಥಿತ್ವಾ ಸ್ವದೇಶಂ ಪ್ರತಿ ಯಾಂತಿ ತೇ ॥೧೧॥ ಸ್ವಗೃಹಂ ತು ಸಮಾಸಾದ್ಯ ಷಷ್ಠ್ಯಾಂ ವೈ ವ್ರತಮಾಚರನ್ । ಇತ್ಯಾ-

---

ರುಚಿಕರವಾದ ಬಾಳೆಹಣ್ಣುಗಳು-ಉಪ್ಪು ಬೆರಸಿದ ಮಜ್ಜಿಗೆ-ಬಾಡಿಸಿಕೊಳ್ಳಲ್ಪಡುವ ಭಕ್ಷ್ಯ-ಪೇಯ-ಉಪ್ಪುಕರಿ ಮುಂತಾದುವುಗಳನ್ನು ಬೇಕಾದಷ್ಟು ಉಂಡು, ಕೈತೊಳೆದು, ತಾಂಬೂಲವನ್ನು ಮೆದ್ದರು. ಕೆಲವರು ಗಾಯಕರು ಹಾಡುತ್ತಿದ್ದರು. ಕೆಲವರು ತೆಂಗಿನಕಾಯಿ ಬಾಳೆಹಣ್ಣು ಮುಂತಾದುವನ್ನು ತಿನ್ನುತ್ತಿದ್ದರು. ಕೆಲವರು ವೇದವಿಚಾರ ಮಾಡುತ್ತಿದ್ದರು. ದೇವರ ಪ್ರಸಾದವನ್ನುಂಡು ಹಲವರು ತಮ್ಮ ದೇಶದ ಸಜ್ಜನರೊಡನೆ ಮಾತಾಡುತ್ತಿದ್ದರು. ಕೆಲವರು ಬೇರೆ ವೃತ್ತಾಂತವನ್ನು ಕೇಳುತ್ತಾ ಸುಖವಾಗಿರುತ್ತಿದ್ದರು. ॥ ೧೦ ॥ ಈ ರೀತಿಯಾಗಿ ಆ ಜನರು ಸುಬ್ರಹ್ಮಣ್ಯನನ್ನು ಸೇವಿಸುತ್ತ, ಷಷ್ಠೀ ಮಹೋತ್ಸವವನ್ನು ಕಂಡು, ಸಪ್ತಮೀಪರ್ಯಂತವಾಗಿ ನಿಂತು, ತಮ್ಮ ದೇಶಕ್ಕೆ ಹಿಂತೆರಳಿ ಮನೆಗೆ ಬಂದು ಆ ಮೇಲೆ ಪ್ರತಿ ವರ್ಷವೂ ಷಷ್ಠೀವ್ರತವನ್ನು ಮಾಡುತ್ತಿದ್ದರು. ಈ ರೀತಿಯ ಆಚರಣೆಯ ಪ್ರಭಾವ

ಚರಣಮಹಾತ್ಮ್ಯತ್ತೇ ಪುತ್ರಾನ್ ಪ್ರಾಪ್ನುವಂತಿ ಚ ॥ ಧನಧಾನ್ಯ-ಸಮೃದ್ಧಿಂ ಚ ಅಂತೇ ಪರಪದಂ ತಥಾ ॥ ೧೨ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ಷೋಡಶೋಽಧ್ಯಾಯಃ ॥ ೧೬ ॥

---

## ಅಥ ಸಪ್ತದಶೋಽಧ್ಯಾಯಃ

ಶ್ರೀಸೂತ ಉವಾಚ — ಪುನರ್ವಕ್ಷ್ಯಾಮಿ ಭೋ ವಿಪ್ರಾಃ ಸುಬ್ರಹ್ಮಣ್ಯಸ್ಯ ವೈಭವಮ್।ಯಚ್ಛ್ರುತ್ವಾ ಮುಚ್ಯತೇ ಜಂತುರ್ಜನ್ಮ ಸಂಸಾರಬಂಧನಾತ್ ॥೧॥ ಯೋ ಪುತ್ರಕಾಂಕ್ಷಿಣಶ್ಚೈವ ಧನಕಾಮಾಶ್ಚ ಯೇ ನರಾಃ । ಭೂಕಾಮಾಃ ಕನ್ಯಕಾಕಾಮಾಸ್ತೇ ಸರ್ವೇ ತದವಾಪ್ನುಯುಃ ॥೨॥ ಯಾಃ ಸ್ತ್ರಿಯಃ ಪುತ್ರಕಾಮಾಶ್ಚ ಉಚ್ಛಿಷ್ಟಸ್ಯ ಚ ಮಾರ್ಜನಮ್ । ಕೃತ್ವಾ ತನ್ಮೂಲಮಂತ್ರಂ ಚ ಜಪ್ತ್ವಾ ಸಿದ್ಧಿಮವಾ

---

ದಿಂದ ಆ ಭಕ್ತರು ಪುತ್ರರನ್ನೂ, ಧನಧಾನ್ಯ ಸಮೃದ್ಧಿಯನ್ನೂ, ಕೊನೆಗೆ ಉತ್ತಮ ಗತಿಯನ್ನೂ ಪಡೆಯುತ್ತಿದ್ದರು" ॥ ೧೨ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು ॥ ೧೬ ॥

---

ಸೂತರೆಂದರು— "ಬ್ರಾಹ್ಮಣರಿರಾ! ಮನುಷ್ಯರ ಸಂಸಾರಬಂಧವನ್ನೇ ಕಡಿಯತಕ್ಕ ಸುಬ್ರಹ್ಮಣ್ಯನ ಇನ್ನೊಂದು ಮಹಿಮೆಯನ್ನು ಹೇಳುವೆನು— ಯಾರು ಮಕ್ಕಳನ್ನು ಬಯಸುವರೋ, ಯಾರು ದ್ರವ್ಯವನ್ನು ಬಯಸುವರೋ, ಭೂಮಿಯನ್ನು ಬಯಸುವರೋ, ಅಥವಾ ಕನ್ಯೆಯನ್ನು ಅಪೇಕ್ಷಿಸುವರೋ ಅಂತಹವರು ತಮ್ಮ ಆಯಾ ಇಷ್ಟವನ್ನು ಹೊಂದುವರು. ಮಕ್ಕಳಾಗಬೇಕೆಂದಿರುವ ಯಾವ ಸ್ತ್ರೀಯರು ಬ್ರಾಹ್ಮಣೋಚ್ಛಿಷ್ಟವನ್ನು ಮೈಗೆ ಲೇಪಿಸಿಕೊಂಡು, ಸುಬ್ರಹ್ಮಣ್ಯನ ಮೂಲಮಂತ್ರವನ್ನು ಜಪಿಸುತ್ತಾರೋ, ಅವರು ಸಂತಾನ

ಪ್ನುಯುಃ ॥ ೩ ॥ ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ । ತೌಳವಾಹ್ವಯದೇಶೇತು ರಾಜಕನ್ಯಾಪ್ರಸಂಗಜಮ್ ॥೪॥ ತದ್ದೇಶರಾಜಪುತ್ರೀ ಸಾ ಸುಬ್ರಹ್ಮಣ್ಯಂ ಪ್ರಣಮ್ಯ ಚ । ಪುತ್ರಾನ್ ದೇಹಿ ಮಮಾನಂತ ಇತಿ ವಿಜ್ಞಾಪಯತ್ಯತೌ ॥ ೫ ॥ ತದಾರಭ್ಯ ಚ ಸಾ ಯೋಷಿದ್ದ್ವಿಜೋಚ್ಛಿಷ್ಟ-ಪ್ರಮಾರ್ಜನಮ್ । ಮೂಲಮಂತ್ರ ಜಪಂ ಚಾಪಿ ಚಕಾರ ಬಹುವತ್ಸರಮ್ ॥ ೬ ॥ ತಸ್ಯೈಪ್ರಸನ್ನೋ ಭಗವಾನ್ ಸುಬ್ರಹ್ಮಣ್ಯೋ ದಯಾನಿಧಿಃ ತವ ಪುತ್ರಂ ಪ್ರದಾಸ್ಯಾಮಿ ಮತ್ಸೇವಾಂ ಕುರು ಸರ್ವದಾ ॥ ೭ ॥ ಇತ್ಯುವಾಚ ಮಹಾತೇಜಾ ಮೇಘಗಂಭೀರಯಾ ಗಿರಾ । ತತಸ್ತು ಪ್ರತ್ಯುವಾಚಾಸೌ ಜಗದಾನಂದಕಾರಕಮ್ ॥ ೮ ॥ ಕನ್ಯೋವಾಚ–ಕದಾ ದಾಸ್ಯಸಿ ಮೇ ದೇವ ಸುತಂ ಸರ್ವಗುಣಾನ್ವಿತಮ್ । ಏತದಾಕರ್ಣ್ಯ ದೇವೇಶಃ ಕೃಪಯಾ ಪರಯಾ ಯುತಃ ॥ ೯ ॥ ತತಸ್ತು ಪ್ರತ್ಯುವಾಚೇದಂ ಪ್ರಹಸನ್ ದೈವತೈಸ್ಸಹ। ವರ್ಷಾಂತೇ ತೇ ಸುತಂ ದಾಸ್ಯೇ ತಾವತ್ತ್ವಂ ಚ ಮಮಾಲಯಂ ॥ ೧೦ ॥ ಏವಮೇವ ವ್ರತಂ ಕೃತ್ವಾ ಮಾಂ ಪೂಜಯ ವರಾನನೇ । ಕನ್ಯಕಾ ತದ್ವ್ರತಂ ಚಾಪಿ ತಥಾ

---

ಲಾಭವನ್ನು ಹೊಂದುವರು. ಈ ವಿಷಯದಲ್ಲಿ ಒಬ್ಬ ತೌಳವ ದೇಶದ ರಾಜಪುತ್ರಿಯ ಇತಿಹಾಸವನ್ನು ಹೇಳುವರು. ಆ ದೇಶದ ರಾಜಪುತ್ರಿಯು ಸುಬ್ರಹ್ಮಣ್ಯನನ್ನು ಕಂಡು ವಂದಿಸಿ, 'ಶ್ರೇಷ್ಠ ದೇವನೆ! ನನಗೆ ಮಕ್ಕಳನ್ನು ಕೊಡು' ಎಂದು ಪ್ರಾರ್ಥಿಸಿ,|| ೫ || ಆ ಕಾಲ ಮೊದಲ್ಗೊಂಡು ಆಕೆಯು ಅನೇಕ ವರ್ಷಗಳಲ್ಲಿ ಬ್ರಾಹ್ಮಣರ ಉಚ್ಛಿಷ್ಟವನ್ನು ಲೇಪಿಸಿಕೊಂಡು, ಮೂಲಮಂತ್ರವನ್ನು ಜಪಿಸುತ್ತ ಸೇವಿಸುತ್ತಿದ್ದಳು. ಕೃಪಾಳುವಾದ ಆ ದೇವನು ಪ್ರಸನ್ನನಾಗಿ 'ರಾಜಪುತ್ರಿಯೇ! ನಿತ್ಯದಲ್ಲಿಯೂ ನನ್ನ ಸೇವೆಯನ್ನು ಮಾಡುತ್ತಿರು. ನಿನಗೆ ಮಕ್ಕಳನ್ನು ಕೊಡುವೆನು" ಎಂದು ಆಜ್ಞಾಪಿಸಲು, ರಾಜಪುತ್ರಿಯೆಂದಳು— "ದೇವನೆ! ಸರ್ವಗುಣಭರಿತನಾದ ಪುತ್ರನನ್ನು ಎಂದಿಗೆ ಕೊಡುವೆ?" ಎಂದು ಬಿನ್ನವಿಸಿದ ರಾಜಕನ್ಯೆಗೆ ಆ ದೇವನೆಂದನು—"ಹೀಗೆಯೇ ಒಂದು ವರ್ಷ ನನ್ನ ವ್ರತವನ್ನು ಮಾಡು. ವರ್ಷಾನಂತರ ನಿನಗೆ ಗುಣವಂತನಾದ ಪುತ್ರನನ್ನೀಯುವೆನು" ಎನ್ನಲು, ॥ ೧೦ ॥ ರಾಜಪುತ್ರಿಯು ಅಂತೆಯೇ ವ್ರತವನ್ನಾಚರಿಸಿ, ವರ್ಷಾನಂತರ ವರವನ್ನು ಪಡೆದು, ತನ್ನ ಮನೆಗೆ ಹೋಗಿ ಪುತ್ರನನ್ನು ಪಡೆದು ಸಂತುಷ್ಟಳಾಗಿ, ತನ್ನ ಇಷ್ಟದೇವತಾ ಪೂಜೆಯನ್ನು

**ಸೇವಾಂ ಚಕಾರ ಸಾ ॥೧೧॥ ವರ್ಷಾಂತೇ ತು ವರಂ ಪ್ರಾಪ್ಯ ಯಯೌ ಸ್ವಗೃಹಮಂಜಸಾ । ಸ್ವಗೃಹೇ ಸಾ ಸುತಂ ಲಬ್ಧ್ವಾ ಬಹುಸಂತೋಷಸಂಯುತಾ ॥ ೧೨ ॥ ಸ್ವಸ್ಯೇಷ್ಟದೇವತಾಪೂಜಾಂ ಕರೋತಿ ಸತತಂ ಮುದಾ । ತತೋ ಲಬ್ಧ್ವಾ ಧನಂ ಧಾನ್ಯಂ ಸುತೇನ ಚ ಧನೇನ ಚ ॥ ೧೩ ॥ ಪ್ರಾಕಾರಂ ಪರಿತಸ್ತತ್ರ ಶಾಲಾಂ ಚೈವ ಚಕಾರ ಸಾ । ದೇವಸ್ಯ ಪೂರ್ವೇ ಪಶ್ಚಾಚ್ಚ ದಕ್ಷಿಣೋತ್ತರ ದೇಶಕೇ ॥೧೪॥ ಪ್ರಾಕಾರಗೃಹನಿರ್ಮಾಣಂ ಕಾರಯಾಮಾಸ ಭೋ ದ್ವಿಜಾಃ । ತದ್ರಾಜ್ಯಕೋಶದ್ರವ್ಯೇಣ ಪೂಗಪುನ್ನಾಗಸಂಯುತಮ್ ॥೧೫॥ ನಾರಂಗಮಾತುಲಂಗಾದಿಜಂಬೀರಕದಲೀಯುತಮ್ । ಉದ್ಯಾನಂ ಕಾರಯಿತ್ವಾ ತು ಸರ್ವವೃಕ್ಷಸಮನ್ವಿತಮ್ ॥೧೬॥ ಕಲಶಂ ಚ ಚತುರ್ದಿಕ್ಷು ಸ್ಥಾಪಯಾಮಾಸ ಸುಂದರಮ್ । ಮೃಷ್ಟಾನ್ನಂ ದಧಿಮಿಶ್ರಂ ತು ನೈವೇದ್ಯಾರ್ಥಮಕಲ್ಪಯತ್ ॥೧೭॥ ಕಾಂಸ್ಯಪಾತ್ರಾಣಿ ಬಹುಶೋ ಬಾಲಕೋಽಸೌ ಪ್ರದತ್ತವಾನ್ । ಕ್ಷೇತ್ರಂ ಗೃಹೀತ್ವಾ ದ್ರವ್ಯೇಣ ತಸ್ಯಾಸೌ ಚ ಪ್ರದತ್ತವಾನ್ ॥ ೧೮ ॥ ದರ್ಪಣಂ ಚ ಪ್ರಕಾಶಾರ್ಥಂ ಘಂಟಾ ನಾದಾರ್ಥಮೇವ ಚ । ಸುಬ್ರಹ್ಮಣ್ಯಾಯ ದತ್ವಾ ತು ಕೃತಾರ್ಥೋಽಭೂತ್ಪ್ರಸಾದತಃ ॥೧೯॥**

---

ನಿತ್ಯದಲ್ಲಿಯೂ ಮಾಡುತ್ತ, ಧನಧಾನ್ಯಸಂತತಿ ಸಂಪತ್ತುಗಳನ್ನು ಹೊಂದಿ ಸುಬ್ರಹ್ಮಣ್ಯ ದೇವಾಲಯಕ್ಕೆ ಸುತ್ತಲೂ ಪ್ರಾಕಾರವನ್ನು ಮಾಡಿಸಿದಳು. ಆ ರಾಜ್ಯ ದ್ರವ್ಯಭಂಡಾರದ ದ್ರವ್ಯದಿಂದ ಮನೆಗಳನ್ನು ಕಟ್ಟಿಸಿ ॥ ೧೫ ॥ ಅಡಿಕೆ–ನಾಗಸಂಪಿಗೆ–ಕಿತ್ತಳೆ – ಮಾದಳ – ನಿಂಬೆ – ಬಾಳೆಹಣ್ಣು ಮೊದಲಾದ ಸರ್ವ ವೃಕ್ಷಗಳ ಉಪವನವನ್ನೂ ಮಾಡಿಸಿ, ಪ್ರಾಕಾರದ ನಾಲ್ಕು ದಿಕ್ಕುಗಳಲ್ಲಿಯೂ ಅಂದವಾದ ಕಲಶಗಳನ್ನಿಡಿಸಿ, ಒಳ್ಳೆಯ ಮೊಸರಿನಿಂದ ಕೂಡಿದ ಮೃಷ್ಟಾನ್ನವನ್ನೂ ದೇವರ ಸಮರ್ಪಣೆಗೆ ಏರ್ಪಡಿಸಿದಳು. ಆಕೆಯ ಪುತ್ರನೂ ದೇವರಿಗೆ ಕಂಚಿನ ಅನೇಕ ಪಾತ್ರೆಗಳನ್ನು ಮಾಡಿಸಿ, ಗದ್ದೆಗಳನ್ನು ಕ್ರಯಕ್ಕೆ ಪಡೆದು ದೇವರಿಗೆ ಉತ್ತಾರವಾಗಿ ಬಿಟ್ಟನು. ಬೆಳಕು ಬರುವುದಕ್ಕಾಗಿ ಕನ್ನಡಿಯನ್ನೂ, ಬಾರಿಸುವುದಕ್ಕಾಗಿ ಘಂಟೆಯನ್ನೂ ಸುಬ್ರಹ್ಮಣ್ಯನಿಗೆ ಸಮರ್ಪಿಸಿ, ಆತನ ಅನುಗ್ರಹದಿಂದ ಕೃತಾರ್ಥನಾದನು. ಭಕ್ತಿಪೂರ್ವಕವಾಗಿ ಸುಬ್ರಹ್ಮಣ್ಯನ ಪೂಜೆ ಮಾಡಿದವನು ವಿಜಯ–ಆರೋಗ್ಯ–ಸುಖಭೋಗ–ಮೋಕ್ಷಗಳನ್ನು ಪಡೆಯುವನು. ॥ ೨೦ ॥ ಭಕ್ತಿ

**ಸುಬ್ರಹ್ಮಣ್ಯಸ್ಯ ದೇವಸ್ಯ ಯಃ ಕುರ್ಯಾದ್ಭಕ್ತಿ ಪೂಜನಮ್ । ಸ ಏವ ವಿಜಯಾರೋಗ್ಯಂ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೨೦ ॥ ಸುಬ್ರಹ್ಮಣ್ಯಸ್ಯ ಚಾರಿತ್ರಂ ಭಕ್ತ್ಯಾ ಯಃ ಪಠತೇ ನರಃ । ಸುಬ್ರಹ್ಮಣ್ಯಸ್ಯ ಸಾಲೋಕ್ಯಂ ಪ್ರಾಪ್ನೋತ್ಯೇವ ನ ಸಂಶಯಃ ॥ ೨೧ ॥ ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಲಿಖಿತ್ವಾ ಯಸ್ತು ದಾಸ್ಯತಿ । ತಸ್ಯೇಷ್ಟಕಾಮಾನ್ ಸಕಲಾನ್ ದಾಸ್ಯತ್ಯೇವ ನ ಸಂಶಯಃ ॥ ೨೨ ॥**

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ಸಪ್ತದಶೋಽಧ್ಯಾಯಃ ॥ ೧೭ ॥

---

## ಅಥ ಅಷ್ಟಾದಶೋಽಧ್ಯಾಯಃ

**ಶ್ರೀಸೂತ ಉವಾಚ–ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಪುನರ್ವಕ್ಷ್ಯಾಮ್ಯಶೇಷತಃ । ರಕ್ಷಣಂ ಕೃತವಾನ್ನಿತ್ಯಂ ತೌಳವಾನಾಂ ವಿಶೇಷತಃ ॥ ೧ ॥ ತತ್ರಸ್ಥಾಶ್ಚ ನೃಪಾ ನಿತ್ಯಂ ದಯಾದಾಕ್ಷಿಣ್ಯ ವರ್ಜಿತಾಃ । ಸದಾ ದುಷ್ಕರ್ಮನಿರತಾಃ । ಸ್ನಾನದಾನಪರಾಙ್ಮುಖಾಃ ॥ ೨ ॥**

---

ಯಿಂದ ಸುಬ್ರಹ್ಮಣ್ಯನ ಈ ಮಹಿಮೆಯನ್ನು ಓದಿದವನು ನಿಸ್ಸಂಶಯವಾಗಿ ಇ ದೇವನ ಲೋಕವನ್ನು ಸೇರುವನು. ಈ ಸುಬ್ರಹ್ಮಣ್ಯ ಮಹಾತ್ಮ್ಯೆವನ್ನು ಬರೆದು ಕೊಟ್ಟವನಿಗೆ ದೇವನು ಸಮಸ್ತವಾದ ಇಷ್ಟಗಳನ್ನೀಯುವನು" ॥ ೨೨ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು ॥ ೧೭ ॥

---

ಸೂತರೆಂದರು—'ಸುಬ್ರಹ್ಮಣ್ಯನ ಮಹಿಮೆಯನ್ನು ಪುನಃ ಹೇಳುವೆನು. ಸುಬ್ರಹ್ಮಣ್ಯನು ವಿಶೇಷವಾಗಿ ತೌಳವ ದೇಶಸ್ಥರ ರಕ್ಷಣೆಯನ್ನು ಮಾಡಿದ ಮಹಿಮೆಯನ್ನು ಕೇಳಿರಿ. ಆ ದೇಶದ ರಾಜರು ದಯಾದಾಕ್ಷಿಣ್ಯಗಳನ್ನು ತೊರೆದು, ನಿತ್ಯದಲ್ಲಿಯೂ ದುಷ್ಕರ್ಮಗಳನ್ನಾಚರಿಸುತ್ತ, ಸ್ನಾನದಾನಾದಿ ಸತ್ಕರ್ಮಗಳನ್ನು ತ್ಯಜಿಸಿದ್ದರು. ಹಾಗಿದ್ದರೂ ಸುಬ್ರಹ್ಮಣ್ಯನು ಆ ರಾಜರಿಗೆ ಸದ್ಬುದ್ಧಿ ಹುಟ್ಟುವಂತೆ ಮಾಡಿದನು. ಸುಬ್ರಹ್ಮಣ್ಯನ ಅನು

ತಥಾಪಿ ತೇಷಾಂ ದೇವೇಶಃ ಸುಬುದ್ಧಿಂ ಜನಯೆನ್ ಸದಾ । ತತ್ರ ದುರ್ಭಿಕ್ಷಪೀಡಾ ನ ಸುಬ್ರಹ್ಮಣ್ಯಪ್ರಸಾದತಃ ॥ ೩ ॥ ವಿಘ್ನೇಶಂ ಭೈರವಂ ಚೈವ ಗೌರೀಶಂ ಸ್ಥಾಪ್ಯ ಯತ್ನತಃ।ತದ್ದೇಶಸ್ಥಾನ್ ಜನಾನ್ ಸರ್ವಾನ್ ತಥಾಚೊತ್ತರದೇಶಕಾನ್ ॥ ೪ ॥ ಸಂರಕ್ಷಯತ್ಯಸೌ ಭಕ್ತಾನ್ ಸರ್ವದಾ ಸಮುಪಸ್ಥಿತಃ । ತೌಳವಾಹ್ವಯದೇಶಸ್ಥಾನ್ ವಿಶೇಷಾತ್ಪಾತಿ ಸೇವಕಾನ್ ॥ ೫ ॥ ತತ್ರತ್ಯಾ ಯತ್ರ ಕುತ್ರಾಪಿ ಗಚ್ಛೇಯುರಿತಿ ಶಂಕಯಾ । ಪಶ್ಚಿಮೇ ದಿಶಿ ಸಂಸ್ಥಾಪ್ಯ ಸಮುದ್ರಂ ಬ್ರಹ್ಮಸಂಭವಃ ॥೬॥ ಉತ್ತರಸ್ಯಾಂ ತು ದೇವೇಶಃ ನದೀಂ ಸಂಸ್ಥಾಪ್ಯ ಯತ್ನತಃ । ಪೂರ್ವಾಸ್ಯಾಂ ದಿಶಿ ಸಂಸ್ಥಾಪ್ಯ ಭೈರವಂ ಚ ಗಣಾಧಿಪಮ್ ॥ ೭ ॥ ಅವಾಚ್ಯಾಂ ದಿಶಿ ಸಂಸ್ಥಾಪ್ಯ ಸರ್ವದಾ ವರ್ತತೇ ಬಿಲಮ್ । ಶೌನಕ ಉವಾಚ—ವಿಘ್ನೇಶೋ ಭೈರವ ಶ್ಚಾತ್ರ ಕಥಮೇತೌ ಪ್ರತಿಷ್ಠಿತೌ॥ ೮ ॥ ಕೇನ ತಾಭ್ಯಾಂ ಕಿಂ ಫಲಮ್ ಸ್ಯಾದ್ವದ ಸೂತ ಮಹಾಮತೇ ।ಶ್ರೀಸೂತ ಉವಾಚ–ವಿಘ್ನೇಶಸ್ಸರ್ವ ವಿಘ್ನಾನಾಂ ಪಾರ್ವತೀಶಂಕರಪ್ರಿಯಃ ॥ ೯ ॥ ಷಣ್ಮುಖಸ್ಯ ಚ ಸ ಭ್ರಾತಾ ತತ್ರ ಸ್ಥಿತ್ವಾತು ರಕ್ಷತಿ । ಶಿವಸ್ತು ಸ್ವಸುತಸ್ಯಾರ್ಥೇ ಸರ್ವರಕ್ಷಣ

---

ಗ್ರಹದಿಂದ ಆ ತೌಳವದೇಶದಲ್ಲಿ ದುರ್ಭಿಕ್ಷಪೀಡೆಯೆಂಬುದೇ ಇಲ್ಲ. ಸುಬ್ರಹ್ಮಣ್ಯನು ಗಣಪತಿಯನ್ನೂ, ಭೈರವನನ್ನೂ, ರುದ್ರದೇವರನ್ನೂ ಆ ಸ್ಥಳದಲ್ಲಿ ಪ್ರತಿಷ್ಠೆ ಮಾಡಿಸಿ, ಭಕ್ತರಾದ ಆ ತೌಳವರನ್ನೂ ಮತ್ತು ಉತ್ತರ ದೇಶಸ್ಥರನ್ನೂ ಯಾವಾಗಲೂ ಅಲ್ಲಿ ನೆಲೆನಿಂತು ಕಾಪಾಡುತ್ತಾನೆ. ವಿಶೇಷವಾಗಿ ತನ್ನ ಸೇವಕರಾದ ತೌಳವರನ್ನು ರಕ್ಷಿಸುತ್ತಲಿದ್ದಾನೆ. ॥ ೫ ॥ ಅಲ್ಲಿದ್ದ ಜನರು ಎಲ್ಲಿಗಾದರೂ ಹೋದಾರೆಂಬ ಸಂದೇಹದಿಂದ ಪಶ್ಚಿಮದಲ್ಲಿ ಸಮುದ್ರವನ್ನೇ ಸ್ಥಾಪಿಸಿ, ಉತ್ತರದಿಕ್ಕಿನಲ್ಲಿ ಪ್ರಯತ್ನದಿಂದ ನದಿಯನ್ನೂ ಸ್ಥಾಪಿಸಿ, ಪೂರ್ವದಿಕ್ಕಿನಲ್ಲಿ ಭೈರವನನ್ನೂ ಗಣಪತಿಯನ್ನೂ ಸ್ಥಾಪಿಸಿ, ದಕ್ಷಿಣದಲ್ಲಿ ಗುಹೆಯನ್ನು ಕಲ್ಪಿಸಿ ತಾನೇ ವಾಸಮಾಡಿಕೊಂಡಿರುವನು". ಶೌನಕರು ಕೇಳಿದರು— "ಗಣಪತಿ–ಭೈರವನನ್ನು ಅಲ್ಲಿ ಹೇಗೆ ಯಾರು ಪ್ರತಿಷ್ಠಿಸಿದರು? ಅದರ ಫಲವೇನು?" ಸೂತರೆಂದರು— "ಪಾರ್ವತೀಪರಮೇಶ್ವರರ ಪ್ರೀತಿಗೆ ಪಾತ್ರನಾದ ಆ ವಿಘ್ನೇಶನು ಷಣ್ಮುಖನ ಅಣ್ಣನಾದುದರಿಂದ ಅಲ್ಲಿ ನಿಂತು ಆ ದೇಶವನ್ನು ಕಾಪಾಡುತ್ತಾನೆ. ಶ್ರೀ ರುದ್ರದೇವರು ತನ್ನ ಪುತ್ರನಾದ ಸುಬ್ರಹ್ಮಣ್ಯನಿಗಾಗಿ ನಿಂತು ಸರ್ವರನ್ನೂ ಕಾಪಾಡುವನು. ॥ ೧೦ ॥

ಕಾರಕಃ ||೧೦|| ಶಿವೋ ಭೈರವನಾಮಾ ತು ತತ ಏವ ವ್ಯವಸ್ಥಿತಃ |
ಭೂತ ಪ್ರೇತಪಿಶಾಚಾದ್ಯೈರ್ಗ್ರಹವೇತಾಲನಾಮಕೈಃ ||೧೧|| ನಾರೀ
ಪಿಶಾಚಿಕಾಭಿಶ್ಚ ಪೀಡಿತಾನಾಂ ಚ ರಕ್ಷಣೇ | ಭೈರವೋ ಭೀಮ
ರೂಪೋಽಸೌ ಭಯಾನಾಮಪಹಾರಕಃ ||೧೨|| ಸರ್ವೇಷಾಂ ಭಯ-
ಹಾರಿ ತ್ವಾ ದ್ಭೈರವೇತಿ ಪ್ರಕೀರ್ತ್ಯತೇ | ಗಿರಿ ಮೇವಾಶ್ರಿತಶ್ಚಾಪಿ
ಖಡ್ಗಚರ್ಮ ಕರಃ ಸದಾ || ೧೩ || ಡಮರುಂ ಚ ತ್ರಿಶೂಲಂ ಚ
ಕಪಾಲಂ ಬ್ರಹ್ಮಣೋ ಧರನ್|ಕ್ಷೀರಪಾನಾಶನೋ ಭೂತ್ವಾ ಸರ್ವದಾ
ಪ್ರಭುರೀಶ್ವರಃ || ೧೪ || ಭೂತಪ್ರೇತಪಿಶಾಚಾದಿ-ವಿಘ್ನೇಶಗಣಸಂ-
ಯುತಃ |ಜಪಾಕುಸುಮಸಂಕಾಶೋ ರಕ್ತಗಂಧಾನು ಲೇಪನಃ ||೧೫||
ಕರವೀರೈಃ ರಕ್ತಮಾಲ್ಯೈಃ ಕದಂಬಕುಸುಮಾದಿಭಿಃ | ಚೀನರವ್ಯಾಂ-
ಬರೈರ್ದಿವ್ಯೈರ್ದಿವ್ಯಾಭರಣಭೂಷಿತಃ ||೧೬|| ರಕ್ತಶ್ಮಶ್ರುವಿಲೋಮಾ
ಚ ರಕ್ತಾಕ್ಷೋ ದೀರ್ಘದೇಹವಾನ್| ಕಂಠಸ್ಯ ಸಿಂಹನಾದೇನ ಸಂಭೃ-
ತೇನ ಸಮನ್ವಿತಃ ||೧೭|| ಗ್ರಹೀತ ಖಡ್ಗಹಸ್ತಶ್ಚ ಧೂಮ್ರಾಕ್ಷೋ
ಧೂಮ್ರ ಲೋಚನಃ|ದೈತ್ಯಾನಾಂ ಚ ಶಿರಚ್ಛಿತ್ವಾ ಮಾಲಾಂ ಕೃತ್ವಾ ತು

---

ಆ ರುದ್ರದೇವನೇ ಭೈರವನೆನಿಸಿ ಅದೇ ನಿಮಿತ್ತದಿಂದಲೇ ವಾಸಮಾಡುತ್ತಾನೆ. ಆ ಭೈರವನು ಭೂತ-ಪ್ರೇತ - ಪಿಶಾಚ - ಗ್ರಹ - ಬೇತಾಲ - ಪಿಶಾಚಿನಿಗಳಿಂದ ಪೀಡಿತರಾದವರನ್ನು ಕಾಪಾಡಲು ಭಯಂಕರದಾದ ಭೈರವಾಕಾರವನ್ನು ತಾಳಿ ಸರ್ವಭಯವನ್ನೂ ಪರಿಹರಿಸುವನು. ಎಲ್ಲರ ಭಯನಿವಾರಕನಾದುದರಿಂದಲೇ ಭೈರವನೆನಿಸಿರುವನು. ಪರ್ವತದಲ್ಲಿ ನಿಂತು ಖಡ್ಗ-ಢಾಲು-ಡಮರು-ತ್ರಿಶೂಲ-ಬ್ರಹ್ಮಕಪಾಲಗಳನ್ನು ಕೈಯಲ್ಲಿ ಧರಿಸಿಕೊಂಡಿರುತ್ತಾನೆ. ನಿತ್ಯದಲ್ಲಿಯೂ ಹಾಲನ್ನು ಕುಡಿಯುತ್ತ, ಭೂತ-ಪ್ರೇತ-ಪಿಶಾಚ-ವಿಘ್ನೇಶಗಣಗಳಿಂದ ಕೂಡಿಕೊಂಡು, ದಾಸಾಳಹೂವಿನಂತೆ ರಕ್ತವರ್ಣನಾಗಿ, ರಕ್ತವರ್ಣದ ಗಂಧವನ್ನು ಲೇಪಿಸಿ, || ೧೫ || ಕೆಂಪುಕಣಿಗಿಲು-ಕಿಸ್ಕಾರ ಪುಷ್ಪ ಮೊದಲಾದವುಗಳಿಂದ ಅಲಂಕೃತನಾಗಿ, ತೆಳ್ಳಗಾದ ವಸ್ತ್ರಗಳಿಂದಲೂ, ದಿವ್ಯಾಭರಣಗಳಿಂದಲೂ ಅಲಂಕೃತನಾಗಿ, ಕೆಂಪುಗಡ್ಡ-ಮೀಸೆ-ಕೆಂಗಣ್ಣುಗಳುಳ್ಳವನಾಗಿ, ದೀರ್ಘವಾದ ದೇಹದಿಂದಲೂ ಸಿಂಹನಾದದಿಂದಲೂ ಕೂಡಿ ಖಡ್ಗಪಾಣಿಯಾಗಿ, ದೈತ್ಯರ ತಲೆಗಳನ್ನು ಕಡಿದು ತನ್ನ ಕಂಠದಲ್ಲಿ ರುಂಡಮಾಲೆಯನ್ನು ಧರಿಸಿರುವನು. ರಾವಣ - ಅತಿಕಾಯ - ಇಂದ್ರಜಿತ್ - ಕುಂಭಕರ್ಣ - ಮಾರೀಚ - ಹಿಡಿಂಬ-ಖರ

ಕಂಠಕೇ ॥ ೧೮ ॥ ರಾವಣಸ್ಯಾತಿಕಾಯಸ್ಯ ಇಂದ್ರಜಿತ್ಕುಂಭಕರ್ಣಯೋಃ । ಮಾರೀಚಸ್ಯ ಹಿಡಿಂಬಸ್ಯ ಖರಾದೀನಾಂ ಶಿರಾಂಸಿ ಚ ॥ ೧೯ ॥ ಛಿತ್ವಾ ಸ್ವಕಂಠಾಭರಣಂ ಕೃತ್ವಾ ಚೈವ ವಸತ್ಯಸೌ। ಶೌನಕಃ ಉವಾಚ—ತೇಷಾಂ ಶಿರಾಂಸಿ ಚಿಚ್ಛೇದ ಕಥಂ ಭೈರವನಾಮಕಃ ॥೨೦॥ ತದಾಸ್ಮಾಕಂ ಸಮಾಚಕ್ಷ್ವ ಸೂತಪೌರಾಣಿಕೋತ್ತಮ । ಶ್ರೀಸೂತ ಉವಾಚ—ಪರಮಾತ್ಮಾ ಪರಂಬ್ರಹ್ಮ ಪರಿಪೂರ್ಣಸ್ಸನಾತನಃ ॥ ೨೦ ॥ ಗುಣತ್ರಯಾತ್ಮಕಂ ವಿಶ್ವಂ ಸೃಷ್ಟ್ವಾಽಸೌ ಚ ಪ್ರವರ್ತತೇ । ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವಸ್ಥಿತಃ ॥ ೨೨ ॥ ಬ್ರಹ್ಮಾ ಚ ಸೃಜತೇ ವಿಶ್ವಂ ಸ್ಥಿತಂ ಪಾಲಯತೇ ಹರಿಃ । ರುದ್ರರೂಪೇಣ ಸಂಹಾರಂ ಕರೋತಿ ತ್ರಿಗುಣಾತ್ಮಕಃ ॥೨೩॥ ತಸ್ಮಾತ್ಸ ಏವ ಕರ್ತಾಸೌ ಸೃಷ್ಟಿಸ್ಥಿತ್ಯಂತಕರ್ಮಣಾಮ್ । ಕಾಲಭೈರವರೂಪೇಣ ಖಲವರ್ಗಂ ಜಿಘಾಂಸತಿ ॥೨೪॥ ಸ್ವಯಮೇವ ಪ್ರತಿಷ್ಠಾಪ್ಯ ಗಿರೇಸ್ಸಂರಕ್ಷಕೋ ಹಿ ಸಃ । ಇಮಂ ದೇಶಂ ರಕ್ಷ ದೇವ ಭೈರವೋ ಭೀಮರೂಪಧೃತ್ ॥೨೫॥ ಇತಿ ತಂ ಪ್ರಾರ್ಥಯಿತ್ವಾತು ಭೈರವಂ ಲೋಕನಾಯಕಮ್ । ಸುಬ್ರಹ್ಮಣ್ಯಸ್ತತ್ರ ತಿಷ್ಠನ್ ಸುಖದಃ

---

ಮೊದಲಾದ ರಾಕ್ಷಸರ ಶಿರಸ್ಸುಗಳನ್ನು ಕಡಿದು ತನ್ನ ಕಂಠಾಭರಣವನ್ನು ಮಾಡಿ ವಾಸಮಾಡಿಕೊಂಡಿರುತ್ತಾನೆ". ಶೌನಕರು ಕೇಳಿದರು—"ಭೈರವನು ಅವರ ಶಿರಸ್ಸುಗಳನ್ನು ಯಾವಾಗ, ಹೇಗೆ ಕತ್ತರಿಸಿದನು? ॥ ೨೦ ॥ ಹೇಳಿ" ನ್ನಲು ಸೂತರೆಂದರು— "ನಿತ್ಯನಾದ ಪರಮಾತ್ಮನು ಸತ್ತ್ವ ರಜಸ್ತಮೋರೂಪವಾದ ಪ್ರಪಂಚವನ್ನು ಸೃಷ್ಟಿಮಾಡಿ ಪಾಲನಾದಿಗಳನ್ನು ಮಾಡುವನು. ಚತುರ್ಮುಖಬ್ರಹ್ಮನಲ್ಲಿ ಬ್ರಹ್ಮಸ್ವರೂಪನಾಗಿ, ಶಿವನಲ್ಲಿ ಶಿವಸ್ವರೂಪನಾಗಿರುವನು. ಬ್ರಹ್ಮನು ಜಗತ್ತನ್ನು ಸೃಷ್ಟಿಮಾಡುವನು, ನಾರಾಯಣನು ಸಂರಕ್ಷಿಸುವನು; ರುದ್ರರೂಪಿಯಾಗಿ ಸಂಹರಿಸುವನು. ಹೀಗೆ ತ್ರಿಗುಣಸ್ವರೂಪನಾದ ಪರಮಾತ್ಮನೇ ಸೃಷಿ-ಸ್ಥಿತಿ-ಸಂಹಾರಕರ್ತನು. ಸಂಹಾರಕರ್ತನಾದ ಶಿವನೇ ಕಾಲಭೈರವಾಕಾರನಾಗಿ ದುಷ್ಟವರ್ಗವನ್ನು ಕೊಲ್ಲಲು ಅಪೇಕ್ಷಿಸುವನು. ಸುಬ್ರಹ್ಮಣ್ಯನು ಆ ಕುಮಾರಪರ್ವತದಲ್ಲಿ ತಾನು ಭೈರವನನ್ನು ರಕ್ಷಣೆಗಾಗಿ ಪ್ರತಿಷ್ಠಿಸಿ, "ಈ ದೇಶವನ್ನು ಕಾಪಾಡು" ॥ ೨೫ ॥ ಎಂದು ಲೋಕನಾಯಕನಾದ ಆ ಭೈರವನನ್ನು ಪ್ರಾರ್ಥಿಸಿ ಸರ್ವರಿಗೂ ಸುಖಪ್ರದನಾಗಿರು

ಪ್ರಾಣಿನಾಂ ಪ್ರಭುಃ ||೨೬|| ಕೃತೇ ಯುಗೇ ರಿಪುರ್ನಾಮ ತ್ರೇತಾ-
ಯಾಂ ಘೋರನಾಮಕಃ | ದ್ವಾಪರೇ ಚಂಡನಾಮಾಸೌ ಕಲೌ ವಟು-
ಕನಾಮವಾನ್||೨೭|| ತಂದೃಷ್ಟ್ವಾ ಭೈರವಂ ದೇವಂ ಸುಬ್ರಹ್ಮಣ್ಯೋ
ಹ್ಯುವಾಚ ಹ | ಸ್ಕಂದ ಉವಾಚ—ದೇವದೇವ ಮಹಾಚಂಡ ಪ್ರಣ-
ತಾರ್ತಿಪ್ರಭಂಜನ ||೨೮|| ನತೋಽಸ್ಮ್ಯಹಂ ತೇ ಸರ್ವೇಷಾಂ ಪಾಲನಂ
ಕುರು ಭೋಃ ಪ್ರಭೋ | ದುಷ್ಟಾನಾಂ ಭಯರೂಪಾಯ ನಮಸ್ತೇ
ಭಯಹಾರಿಣೇ || ೨೯ || ನಮಸ್ತ್ರಿಶೂಲಿನೇ ತುಭ್ಯಂ ನಮಃ
ಖಟ್ವಾಂಗಧಾರಿಣೇ | ನಮಃ ಖಡ್ಗಧರಾಯಾಥ ನಮೋ ರುದ್ರಾಕ್ಷಮಾ-
ಲಿನೇ||೩೦|| ನಮೋ ದಿಗ್ವಾಸಿನೇ ನಿತ್ಯಂ ನಮಶ್ಚರ್ಮಧರಾಯ ಚ |
ನಮಸ್ತೇ ಚಿತ್ಪ್ರಕಾಶಾಯ ನಮೋ ರಕ್ತಾಕ್ಷಿಧಾರಿಣೇ ||೩೧|| ದಂಷ್ಟ್ರಾ-
ಕರಾಲವದನ ನಮಸ್ತೇ ವ್ಯೋಮಕೇಶಿನೇ| ನಮಃ ಕೈಲಾಸನಾಥಾಯ
ನಾಥಾಯಾಮಿತ ತೇಜಸೇ||೩೨|| ಅಸ್ಥಿಮಾಲಾಧರಾಯಾಥ ನಮೋ
ಭೂತಗಣಾಧಿಪ | ತ್ವಮೇವ ಕರ್ತಾ ಭರ್ತಾ ತ್ವಂ ತ್ವಮೇವ ಮಮ
ನಾಯಕಃ || ೩೩ || ಇತ್ಥಂ ಸ್ತುತೋ ಮಹಾದೇವಸ್ತತ್ರೈವ ಭಯ-
ನಾಶನಃ | ಸುಬ್ರಹ್ಮಣ್ಯೇನ ಸಹಿತಸ್ತತ್ರೈವ ಸ್ಥಿತವಾನಸೌ ||೨೪|| ವರಂ
ದಾಸ್ಯ ಇತಿ ಪ್ರಾಹ ಸುಬ್ರಹ್ಮಣ್ಯಂ ಸ ವೈಭವಃ | ಭೈರವ ಉವಾಚ—



---

ವನು. ಕೃತಯುಗದಲ್ಲಿ ರಿಪುವೆನಿಸಿ, ತ್ರೇತಾಯುಗದಲ್ಲಿ ಘೋರನೆನಿಸಿ, ದ್ವಾಪರದಲ್ಲಿ ಚಂಡ ನಾಮಕನಾಗಿ, ಕಲಿಯುಗದಲ್ಲಿ ವಟುಕನೆನಿಸಿರುವ ಆ ಭೈರವನೊಡನೆ ಸುಬ್ರಹ್ಮಣ್ಯನು ಹೇಳಿದನು— "ಎಲೈ ದೇವದೇವನಾದ ಚಂಡನೇ! ಮರೆಹೊಕ್ಕವರ ಪೀಡೆಯನ್ನು ಪರಿಹರಿಸುವ ನಿನಗೆ ವಂದಿಸುವೆನು. ಸರ್ವರ ರಕ್ಷಣೆಯನ್ನೂ ಮಾಡು. ಖಟ್ವಾಂಗ-ಖಡ್ಗ-ತ್ರಿಶೂಲಧಾರಿಯಾದ ಭೈರವನಿಗೆ ನಮಸ್ಕಾರ, || ೩೦ || ದಿಗಂಬರನೂ, ಜ್ಞಾನಪ್ರಕಾಶಸ್ವರೂಪನೂ, ಕೆಂಗಣ್ಣುಳ್ಳವನೂ ಆದ ನಿನಗೆ ವಂದನೆ. ಕೋರೆದಾಡೆಯ ಮುಖದವನೂ, ಮಹಾತೇಜಸ್ವಿಯೂ ಆದ ಕೈಲಾಸಪತಿಯೆ! ವಂದನೆ. ಅಸ್ಥಿಮಾಲೆಯನ್ನು ಧರಿಸಿದ ಭೂತಗಣಕ್ಕೆ ಅಧಿಪತಿಯೆ! ನೀನೇ ಜಗತ್ತಿಗೆ ಸೃಷ್ಟಿಕರ್ತನು, ಪಾಲಕನು" ಎಂದು ಸ್ತುತಿಸಲ್ಪಟ್ಟವನಾಗಿ ಸುಬ್ರಹ್ಮಣ್ಯನೊಡನೆ ಆ ಸ್ಥಳದಲ್ಲಿ ನಿಂತನು. ಆ ಭೈರವನು, 'ಸುಬ್ರಹ್ಮಣ್ಯನೆ! ನಿನಗೆ ವರವನ್ನು ಕೊಡುವೆನು. ಇಂದು ಮೊದಲ್ಗೊಂಡು ನನ್ನ ಅಪ್ಪಣೆಯಿಂದ ಕ್ಷಾಮಾದಿ ಪೀಡೆಯೂ,

ಅದ್ಯ ಪ್ರಭೃತಿ ತ್ವದ್ದೇಶೇ ಕ್ವಾಪಿ ಮಡಾಮರವಿಜ್ವರಃ ||೩೫|| ಭೂತವೇತಾಲಮಾರೀಣಾಂ ದುಷ್ಟಾನಾಂ ಚ ಪ್ರಪೀಡನಮ್ | ಕದಾಪಿ ನಾಸ್ತಿ ನಾಸ್ತ್ಯೇವ ಮಚ್ಛಾಸನವಿಧಾನತಃ ||೩೬|| ಇತ್ಯುಕ್ತ್ವಾ ಭೈರವಶ್ಚಂಡ-ಸ್ತತ್ರೈವಾಸ್ತೇ ನಗೋತ್ತಮೇ|ತದಾರಭ್ಯ ತು ತದ್ದೇಶೇ ಈತಿ ಬಾಧಾ ನ ಜಾಯತೇ ||೩೭|| ಯ ಇದಂ ಭೈರವಸ್ತೋತ್ರಂ ಸುಬ್ರಹ್ಮಣ್ಯೇನ ನೈ ಕೃತಮ್ | ಭಕ್ತ್ಯಾ ಪಠಂತಿ ಮನುಜಾಸ್ತೇಷಾಂ ನಾಸ್ತಿ ಮಹದ್ಭಯಮ್|| ೩೮ || ಆಯುರಾರೋಗ್ಯದಂ ನಿತ್ಯಂ ದುಃಖಾನಾಂ ಚ ವಿನಾಶನಮ್ | ಅಕಾಲಮೃತ್ಯುನಾಶಂ ಚ ಕರೋತ್ಯೇಷ ಸ್ತವೋ ಮಹಾನ್ ||೩೯|| ಯ ಇದಂ ಭೈರವಸ್ತೋತ್ರಂ ಭಕ್ತ್ಯಾ ಚೈವ ಪಠಂತಿ ಹಿ|ಸರ್ವಾನ್ ಕಾಮಾನ್ ಲಭಂತೇ ತೇ ಭೈರವಸ್ಯ ಪ್ರಸಾದತಃ||೪೦|| ಭೈರವಸ್ಯ ಸ್ತುತಿಂ ಯಸ್ತು ಲಿಖಿತ್ವಾ ದಾಸ್ಯತಿ ದ್ವಿಜಃ | ಸ್ವರ್ಗಸ್ಥೈಃ ಪಿತೃಭಿಃ ಸಾರ್ಧಂ ವಿಷ್ಣುಲೋಕೇ ಮಹೀಯತೇ || ೪೧ || ಋಷಯ ಊಚುಃ— ಭೋ ಸೂತ ತವ ಸದ್ವಾಕ್ಯಂ ಶ್ರುತ್ವಾ ಸಂತೋಷ-

---

|| ೩೫ || ಭೂತ-ವೇತಾಲ-ಮಾರಿಕಾದಿಗಳ ಪೀಡೆಯೂ, ಮಸ್ವರ ಪೀಡೆಯೂ ಈ ದೇಶದಲ್ಲಿ ಎಂದಿಗೂ ಇಲ್ಲವೇ ಇಲ್ಲ'. ಹೀಗೆಂದು ಆ ಚಂಡ ಭೈರವನು ಆ ಪರ್ವತದಲ್ಲಿ ನಿಂತನು. ಅಂದಿನಿಂದ ಅಲ್ಲಿ ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಈ ಬಾಧೆಯು ಹುಟ್ಟುವುದಿಲ್ಲ. ಸುಬ್ರಹ್ಮಣ್ಯನು ಹೇಳಿದ ಈ ಭೈರವಸ್ತೋತ್ರವನ್ನು ಭಕ್ತಿಯಿಂದ ಪಠಿಸಿದವರಿಗೆ ಯಾವ ಭಯವೂ ಇಲ್ಲ. ಈ ಸ್ತುತಿಯು ಆಯುಸ್ಸು-ಆರೋಗ್ಯವನ್ನೀಯುವುದು. ನಿತ್ಯ ದುಃಖವನ್ನೂ ಅಕಾಲಮೃತ್ಯುವನ್ನೂ ಪರಿಹರಿಸುವುದು. ಈ ಭೈರವಸ್ತೋತ್ರವನ್ನು ಭಕ್ತಿಯಿಂದ ಪಠಿಸಿದವರು ಆತನ ಅನುಗ್ರಹದಿಂದ ಸಮಸ್ತ ಇಷ್ಟಾರ್ಥವನ್ನು ಪಡೆಯುವರು. || ೪೦ || ಈ ಸ್ತೋತ್ರವನ್ನು ಬರೆದು ಇನ್ನೊಬ್ಬರಿಗೆ ಕೊಟ್ಟವನು ಸ್ವರ್ಗದಲ್ಲಿರುವ ತನ್ನ ಪಿತೃಗಳಿಂದ ಕೂಡಿಕೊಂಡು ವಿಷ್ಣುಲೋಕವನ್ನು ಸೇರುವನು". ಮುನಿಗಳೆಂದರು — ಸೂತಪುರಾಣಿಕನೆ! ನಿನ್ನ ಮಾತನ್ನು ಕೇಳಿ ಆನಂದವನ್ನು ಹೊಂದುತ್ತೇವೆ. ರುದ್ರದೇವರು ಪಾರ್ವತಿಗೆ

ಮಾಪ್ನುಮಃ । ಪಾರ್ವತೀಂ ಪ್ರತಿ ಶಂಭುಶ್ಚ ಕಿಮೂಹ ವದ ತಚ್ಚ ನಃ॥
ಮಯಂ ಶ್ರುತ್ವಾ ಕೃತಾರ್ಥಾಃ ಸ್ಮಸ್ತಸ್ಮಾದ್ವಿಸ್ತರತೋ ವದ ॥ ೪೨ ॥

ಇತಿ ಶ್ರೀಸ್ಕಾಂದೇ ಶ್ರೀಸುಬ್ರಹ್ಮಣ್ಯಕ್ಷೇತ್ರಪುರಾಣೇ
ಅಷ್ಟಾದಶೋಽಧ್ಯಾಯಃ ॥ ೧೮ ॥

## ಅಥೈಕೋನವಿಂಶೋಽಧ್ಯಾಯಃ

ಶ್ರೀಸೂತ ಉವಾಚ—ಪುನರನ್ಯತ್ಪ್ರವಕ್ಷ್ಯಾಮಿ ಸುಬ್ರಹ್ಮಣ್ಯಸ್ಯ ವೈಭವಮ್ । ಸರ್ವೇಷಾಮಿಷ್ಟದಂ ಚೈವ ಕಾಮಭೋಗವಿವರ್ಧನಮ್ ॥೧॥ ಪಾರ್ವತ್ಯೈ ಶಂಕರೇಣೋಕ್ತಂ ಪ್ರವದಾಮಿ ಸುಕೀರ್ತಿದಮ್ । ಶ್ರೀಶಂಕರ ಉವಾಚ—ಷಷ್ಠ್ಯಾಂ ತು ತತ್ರ ತದ್ದೇಶೇ ಸುಬ್ರಹ್ಮಣ್ಯಸ್ಯ ಸನ್ನಿಧೌ ॥ ೨ ॥ ಏಕಭುಕ್ತಂ ಯಃ ಕರೋತಿ ತಸ್ಯ ಪಾಪಕ್ಷಯೋ ಭವೇತ್ । ಪಂಚಮ್ಯಾಂ ವಾ ತು ಷಷ್ಠ್ಯಾಂ ವಾ ಚತುರ್ಥ್ಯಾಂ ಚರುಭೋಜನಮ್॥೩॥ ಏಕಭುಕ್ತಂ ಪ್ರಕರ್ತವ್ಯಮುಪವಾಸಮಥಾಪಿ ವಾ । ತಸ್ಯ ದೇಹಸ್ಯಪಾಪಾನಿ ನಾಶಮಾಯಾಂತಿ

---

ಹೇಳಿದುದನ್ನು ನಮಗೆ ಹೇಳು. ಅದನ್ನು ಕೇಳಿ ಕೃತಾರ್ಥರಾಗುವೆವು. ವಿಸ್ತರಿಸಿ ಹೇಳು" ॥ ೪೨ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು ॥ ೧೮ ॥

---

ಸೂತರೆಂದರು— 'ಮುನಿಗಳಿರಾ! ಸರ್ವರಿಗೂ ಇಷ್ಟವನ್ನೀಯುವ, ಸುಖಭೋಗವನ್ನು ವರ್ಧಿಸುವ, ಪಾರ್ವತಿಗೆ ರುದ್ರದೇವರು ಉಪದೇಶಿಸಿದ ಸುಬ್ರಹ್ಮಣ್ಯನ ಇನ್ನೊಂದು ಮಹಿಮೆಯನ್ನು ಹೇಳುವೆನು. ಶಂಕರನೆಂದನು— "ಆ ಸುಬ್ರಹ್ಮಣ್ಯನ ಸನ್ನಿಧಿಯಲ್ಲಿ ಷಷ್ಠೀದಿನದಲ್ಲಿ ಏಕಭುಕ್ತವ್ರತವನ್ನು ಮಾಡಿದವನ ಪಾಪವು ನಷ್ಟವಾಗುವುದು. ಪಂಚಮೀ ಷಷ್ಠೀ ಅಥವಾ ಚತುರ್ಥೀ ತಿಥಿಗಳಲ್ಲಿ ಮಧ್ಯಾಹ್ನ ಸಮರ್ಪಿತವಾದ ಪವಿತ್ರಾನ್ನವನ್ನು ಉಂಡು ಏಕಭುಕ್ತಮಾಡತಕ್ಕದ್ದು. ಅಥವಾ ಸಂಪೂರ್ಣವಾಗಿ ಉಪವಾಸ ಮಾಡತಕ್ಕದ್ದು. ಅಂತಹವನ ದೇಹದಲ್ಲಿರುವ ಪಾಪಗಳು ಕ್ಷಣಮಾತ್ರದಲ್ಲಿ

ತತ್ಕ್ಷಣಾತ್ ॥ ೪ ॥ ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ । ಶೃಣ್ವತಾಂ ಸರ್ವಪಾಪಘ್ನಮಾಯುರಾರೋಗ್ಯವರ್ಧನಮ್ ॥ ೫ ॥ ಪಂಚದ್ರಾವಿಡದೇಶಸ್ಥಾ ವ್ರತಮೇತದಕುರ್ವತ । ಏಕಸ್ಮಿನ್ ಮಾಸಿ ವೈ ಷಷ್ಠ್ಯಾಂ ಶುಕ್ಲಕೃಷ್ಣೇ ತಥೈವ ಚ ॥ ೬ ॥ ಉಪವಾಸಂ ಚೈಕಭುಕ್ತಂ ನಕ್ತಂ ಜಾಗರಣಂ ತಥಾ । ಚರುಭೋಜ್ಯಂ ತಥಾ ಚಕ್ರುಃ ಸ್ವರ್ಗವಾಸಂ ಚಿಕೀರ್ಷವಃ ॥೭॥ ತೇ ಸರ್ವೇ ಕುಷ್ಠರೋಗೇಣ ಆತುರಾ ವ್ರಣಪೀಡನಾತ್ । ಸರ್ವದುಃಖೈಕನಿಲಯಾಃ ದುಶ್ಚರ್ಮಾಣೋಽಕ್ಷಿಪೀಡಕಾಃ ॥೮॥ ವ್ರತಸ್ಯಾಸ್ಯ ಪ್ರಭಾವೇನ ಕುಷ್ಠಾದ್ಯೈರ್ವಿನಿರ್ಮೋಚಿತಾಃ। ದಿವ್ಯಾಂಗರಮಣೀಯಾಶ್ಚ ದೇವಾನಾಂ ಸದೃಶೋಽಭವನ್ ॥೯॥ ಪುತ್ರವಂತೋ ಧನವಂತೋ ಧನಧಾನ್ಯಯುತಾಸ್ಸದಾ। ಆಧಿವ್ಯಾಧಿವಿನಿರ್ಮುಕ್ತಾ ಅಭವಂಸ್ತೇ ಹ್ಯರೋಗಿಣಃ ॥ ೧೦ ॥ ಸರ್ಪೈರ್ದಷ್ಟಾಶ್ಚ ಯೇ ಕೇಚಿದ್ವೃಶ್ಚಿಕೈಶ್ಚಾಪರೈರಪಿ। ಮೂಷಿಕಾದ್ಯೈರ್ದಂಷ್ಟ್ರಿಭಿಶ್ಚ ವಿನಿರ್ಮುಕ್ತಾ ನ ಸಂಶಯಃ ॥೧೦॥ ಭೂತಪ್ರೇತಪಿಶಾಚಾದ್ಯೈರ್ವ್ಯಾಪ್ತಃ ಸದ್ಯೋ ವಿಮುಚ್ಯತೇ । ದುರ್ಭಿಕ್ಷಂ ಚಾಪರಂ

---

ನಷ್ಟವಾಗುವುವು. ಈ ವಿಷಯದಲ್ಲಿ ಕೇಳತಕ್ಕವರ ಪಾಪವನ್ನು ಪರಿಹರಿಸುವ, ಆಯುರಾರೋಗ್ಯವನ್ನು ವೃದ್ಧಿಗೊಳಿಸುವ ಪುರಾತನವಾದ ಇತಿಹಾಸವನ್ನು ಹೇಳುತ್ತಾರೆ. ॥ ೫ ॥ ಗುರ್ಜರ, ಮಹಾರಾಷ್ಟ್ರ, ಆಂಧ್ರ, ಕರ್ನಾಟಕ, ದ್ರಾವಿಡಗಳೆಂಬ ಐದು ದ್ರಾವಿಡ ದೇಶದವರು ಸ್ವರ್ಗಸುಖಾಭಿಲಾಷೆಯಿಂದ ಈ ಏಕಭುಕ್ತವ್ರತವನ್ನು ಶುಕ್ಲಕೃಷ್ಣಪಕ್ಷಗಳ ಪ್ರತಿ ಷಷ್ಠಿಗಳಲ್ಲಿಯೂ ಮಾಡುತ್ತ, ಏಕಭುಕ್ತ ಅಥವಾ ಉಪವಾಸ-ಜಾಗರಣ, ಇಲ್ಲವೆ ಮಧ್ಯಾಹ್ನ ಪವಿತ್ರಾನ್ನಭೋಜನಗಳನ್ನು ಮಾಡಿದರು. ಕುಷ್ಠರೋಗಿಗಳು, ಕುಷ್ಠದ ಹುಣ್ಣುಗಳಿಂದ ಪೀಡಿತರಾದ ಚರ್ಮರೋಗವುಳ್ಳವರು ಮತ್ತು ಕಣ್ಣುನೋವಿನವರು ಈ ವ್ರತವನ್ನಾಚರಿಸಿ ತಮ್ಮ ರೋಗಪೀಡೆಯನ್ನು ಪರಿಹರಿಸಿಕೊಂಡು, ಸುಂದರ ದೇಹವನ್ನು ಹೊಂದಿ ದೇವತೆಗಳಿಗೆ ಸಮಾನರಾಗಿ, ಪುತ್ರ-ಧನ-ಧಾನ್ಯ ಮೊದಲಾದ ಸಕಲ ಮಂಗಲಸಂಪತ್ತನ್ನು ಹೊಂದಿ, ಆಧಿ-ವ್ಯಾಧಿಗಳನ್ನು ತೊರೆದು ಆರೋಗ್ಯವಂತರಾದರು. ॥ ೧೦ ॥ ಹಾವು-ಚೇಳು-ಇಲಿ-ಹುಲಿ ಮುಂತಾದ ಪ್ರಾಣಿಗಳು ಕಚ್ಚಿದರೂ ಕೂಡ ಅಂತಹರ ಪೀಡೆಯೂ ನಷ್ಟವಾಗುವುದು. ಭೂತ-ಪ್ರೇತ-ಪಿಶಾಚ ಮುಂತಾದವು

ಕಷ್ಟಂ ದುಃಸ್ವಪ್ನಂ ಚೈವ ನಶ್ಯತಿ ||೧೨|| ಸುಬ್ರಹ್ಮಣ್ಯಸ್ಯ ಯಾತ್ರಾಂ
ನ್ವೈ ಕರಿಷ್ಯಾಮೀತಿ ಯೋ ವದೇತ್ | ತಸ್ಯ ಸಂಕಲ್ಪ ಮಾತ್ರೇಣ
ವ್ಯಾಧಿಭಿರ್ಮುಚ್ಯತೇ ಧ್ರುವಮ್ ||೧೩|| ಅಪಸ್ಮಾರಾದಿ ರೋಗಾ-
ಣಾಂ ಪಾಪಾನಾಂ ಚೈವ ಭೇಷಜಮ್ | ಚಕ್ಷುರ್ಹೀನೋ ವಿಜಿ-
ಹ್ವೋಽಪಿ ಹಸ್ತಪಾದಪ್ರಪೀಡಿತಃ ||೧೪|| ಸರ್ವಾವಯವಸೌಖ್ಯಂ
ಚ ಪ್ರಸನ್ನಾತ್ಸ ಲಭೇದ್ಗುಹಾತ್ | ಅಸ್ಮಿನ್ನರ್ಥೇ ಪುರಾವೃತ್ತಂ ಶೃಣ್ವ-
ತಾಮಘನಾಶನಮ್||೧೫|| ಆರ್ಯಾವರ್ತೇ ದ್ವಿಜಃ ಕಶ್ಚಿದ್ಗೋದಾ-
ವರ್ಯಾಸ್ತು ಯಾತ್ರಿಕಃ | ಗೋದಾವರ್ಯಾಂ ತು ಸ ಸ್ನಾತ್ವಾ
ಪ್ರಾಣಾಯಾಮಕರೋಽಭವತ್ || ೧೬ || ಏವಂ ಹಿ ವರ್ತಮಾನಸ್ಯ
ಬಹುಕಾಲಮತಂದ್ರಿಣಃ | ತಥಾಪಿ ತಸ್ಯ ದೇಹಸ್ಥ ರೋಗನಾಶೋ ನ
ಜಾಯತೇ||೧೭|| ಮಾರ್ಕಂಡೇಯಸ್ಸಮಾಗತ್ಯ ವಾಕ್ಯಮೇತದುವಾಚ
ಹ | ಮಾರ್ಕಂಡೇಯ ಉವಾಚ—ಸುಬ್ರಹ್ಮಣ್ಯಸ್ಯ ಯಾತ್ರಾಯಾಂ
ಕುಷ್ಠರೋಗೋ ವಿನಶ್ಯತಿ||೧೮||ಅಹಂ ಚಾಪ್ಯಾಗಮಿಷ್ಯಾಮಿ ತ್ವಯಾ
ಸಾಕಂ ಮುನೀಶ್ವರ | ಇತ್ಯುಕ್ತ್ವಾಸೌ ಸಮಾಯಾತಃ ಸುಬ್ರಹ್ಮಣ್ಯಂ

---

ಹಿಡಿದರೂ ಕೂಡ ಸುಬ್ರಹ್ಮಣ್ಯನ ಅನುಗ್ರಹದಿಂದ ಅವು ಕೂಡಲೇ
ಬಿಟ್ಟುಹೋಗುವುವು. ದುರ್ಭಿಕ್ಷೆ-ದುಃಸ್ವಪ್ನ ಮೊದಲಾದವುಗಳ ಕಷ್ಟವೂ
ಕೂಡಲೇ ನಷ್ಟವಾಗುತ್ತದೆ. "ಸುಬ್ರಹ್ಮಣ್ಯನ ಯಾತ್ರೆಯನ್ನು ಮಾಡು
ವೆನೆಂದು ಸಂಕಲ್ಪಮಾತ್ರ ಮಾಡಿದರೂ ಸಕಲ ವ್ಯಾಧಿಯೂ ನಷ್ಟವಾಗು
ತ್ತದೆ. ಅಪಸ್ಮಾರ ಮೊದಲಾದ ರೋಗಗಳಿಗೂ ಪಾಪಗಳಿಗೂ ಶ್ರೀ ಸುಬ್ರ
ಹ್ಮಣ್ಯ ಸೇವೆಯೇ ಪರಿಹಾರೌಷಧವು. ಕಣ್ಣಿಲ್ಲದವನೂ, ನಾಲಿಗೆ ಇಲ್ಲದವನೂ,
ಕೈಕಾಲುಗಳಿಲ್ಲದವನೂ ಕೂಡ ಪ್ರಸನ್ನನಾದ ಸುಬ್ರಹ್ಮಣ್ಯನಿಂದ ನಷ್ಟವಾದ
ಅಂಗಗಳನ್ನೂ ಪಡೆದು ಸುಖಿಯಾಗುವನು. ಈ ವಿಷಯದಲ್ಲಿ ಒಂದು
ಪಾಪನಾಶಕವಾದ ಇತಿಹಾಸವಿದೆ. || ೧೫ || ಆರ್ಯಾವರ್ತದ ಬ್ರಾಹ್ಮಣನೊ
ಬ್ಬನು ಗೋದಾವರಿಯಾತ್ರೆಗೆ ಬಂದು, ಗೋದಾವರಿಯಲ್ಲಿ ಮಿಂದು ಪ್ರಾಣಾ
ಯಾಮ ಮಾಡಿ, ಅನೇಕ ವರ್ಷದಲ್ಲಿ ವಾಸಮಾಡಿದರೂ ಆತನ ದೇಹದ
ರೋಗ ಪರಿಹಾರವಾಗದಿರಲು, ಅಲ್ಲಿಗೆ ಮಾರ್ಕಂಡೇಯ ಮುನಿಗಳು ಬಂದು,
"ಸುಬ್ರಹ್ಮಣ್ಯನ ಯಾತ್ರೆ ಮಾಡಿದರೆ ಕುಷ್ಠರೋಗ ಪರಿಹಾರವಾಗುವುದು.

ನನಾಮ ಚ ॥೧೯॥ ತತ್ರ ಗತ್ವಾ ಬ್ರಾಹ್ಮಣೋಽಪಿ ಮಹಾತ್ಮ್ಯಂ ಪರ್ಯಪೃಚ್ಛತ।ಸುಬ್ರಹ್ಮಣ್ಯಸ್ಯ ಸಾನ್ನಿಧ್ಯೇ ಉವಾಚ ಮುನಿಪುಂಗವಃ ॥ ೨೦ ॥ ತೇನೋಕ್ತಂ ಚ ತದಾ ಶ್ರುತ್ವಾ ಭಕ್ತಿಯುಕ್ತೋ ದ್ವಿಜೋತ್ತಮಃ । ಮಾರ್ಕಂಡೇಯೋಕ್ತ ಮಾರ್ಗೇಣ ಸುಬ್ರಹ್ಮಣ್ಯಪ್ರತುಷ್ಟಯೇ ॥೨೧॥ ತತೋ ಧಾರಾನದೀಂ ಗತ್ವಾ ಸ್ನಾತ್ವಾ ನದ್ಯಾಂ ಮಹೀಸುರಃ । ಪ್ರದಕ್ಷಿಣತ್ರಯಂ ಕೃತ್ವಾ ಅಂಗೇನಾಸೌ ದ್ವಿಜೋತ್ತಮಃ ॥೨೨॥ ಸುಬ್ರಹ್ಮಣ್ಯಂ ಪುನಃ ಪ್ರಾಪ್ಯ ತಂ ದೃಷ್ಟ್ವಾ ಹರ್ಷಸಂಯುತಃ। ನಮಸ್ಕೃತ್ವಾ ಪುನರಪಿ ಸ್ವಸ್ಥದೇಹೋ ಬಭೂವ ಸಃ ॥ ೨೩ ॥ ತತಃ ಪರಂ ದ್ವಿಜವರಃ ಸ್ತೋತುಂ ತಂ ಚ ಮನೋದಧೇ।ದ್ವಿಜ ಉವಾಚ– ನಮಸ್ತೇಽಸ್ತು ಮಹಾಶೇಷ ನಮಸ್ತೇ ಶಿಖಿವಾಹನ॥೨೪॥ವಟುರೂಪ ನಮಸ್ತೇಽಸ್ತು ನಮಸ್ತೇ ವೇದರೂಪಿಣೇ । ವಿಶ್ವಕರ್ತ್ರೇ ವಿಶ್ವಭರ್ತ್ರೇ ವಿಶ್ವಭೋಕ್ತ್ರೇ ನಮೋ ನಮಃ ॥೨೫॥ ಇತಿ ಸ್ತುತೋಮಹಾಶೇಷಃ ಸುಬ್ರಹ್ಮಣ್ಯೋದಯಾನಿಧಿಃ । ಪ್ರಸನ್ನೋವರದೋ ಭೂತ್ವಾ ಪ್ರಾಹ ವಾಕ್ಯಂ ಚ ಸಸ್ಮಿತಮ್ ॥ ೨೬ ॥ ಸುಬ್ರಹ್ಮಣ್ಯ ಉವಾಚ–ಅಹಂ ತುಷ್ಟೋಽಸ್ಮಿ ಹೇ ವಿಪ್ರ ಸ್ತೋತ್ರೇಣಾನೇನ ಸುವ್ರತ । ವರಂ ವರಯ

---

ನಿನ್ನೊಡನೆ ನಾನೂ ಬರುವೆನು" ಎಂದು ಆತನೊಡನೆ ಸುಬ್ರಹ್ಮಣ್ಯಕ್ಕೆ ಬಂದು, ಆ ದೇವನಿಗೆ ವಂದಿಸಿದರು. ಆ ಬ್ರಾಹ್ಮಣನೂ ದೇವರಿಗೆ ವಂದಿಸಿ, ಮಾರ್ಕಂಡೇಯರಿಂದ ಆ ದೇವನ ಮಹಿಮೆಯನ್ನು ಕೇಳಿ, ||೨೦|| ಭಕ್ತಿಯಿಂದ ಆ ಮುನಿಗಳ ಉಪದೇಶದಂತೆ ದೇವರನ್ನು ಸೇವಿಸುತ್ತ, ಕುಮಾರಧಾರೆಯಲ್ಲಿ ಮಿಂದು, ಮೂರು ಅಂಗಪ್ರದಕ್ಷಿಣೆಮಾಡಿ, ಮರಳಿ ಮರಳಿ ದೇವರ ದರ್ಶನ ವಂದನಸೇವಾದಿಗಳಿಂದ ಕುಷ್ಠರೋಗಪರಿಹಾರ ಮಾಡಿಕೊಂಡು ಸುಖಿಯಾಗಿ, ಆ ಸುಬ್ರಹ್ಮಣ್ಯನನ್ನು ಸ್ತುತಿಸಲು ತೊಡಗಿದನು. 'ಮಹಾಶೇಷಸ್ವರೂಪನೆ, ಮಯೂರವಾಹನನೆ! ಬ್ರಹ್ಮಚಾರಿಯಾಗಿ ವೇದಸ್ವರೂಪಿಯೂ, ಜಗತ್ತಿನ ಸೃಷ್ಟಿಸ್ಥಿತಿಕರ್ತನೂ ಆಗಿರುವ ನಿನಗೆ ವಂದನೆಯು" || ೨೫ || ಹೀಗೆ ಸ್ತುತಿಸಿದ ಆ ಬ್ರಾಹ್ಮಣನಿಗೆ ಕೃಪಾಳುವಾದ ಸ್ಕಂದನು ಪ್ರಸನ್ನನಾಗಿ ನಗುತ್ತ ಹೇಳಿದನು—'ವ್ರತನಿಷ್ಠನಾದ ಬ್ರಾಹ್ಮಣನೆ! ನಿನ್ನ ಸ್ತುತಿಗೆ ಮೆಚ್ಚಿದೆನು. ನಿನ್ನ ಮನಸ್ಸಿನಲ್ಲಿರುವ ವರವನ್ನು ಬೇಡು. ಮಾರ್ಕಂಡೇಯರು ಉಪದೇಶಿಸಿದ ಕ್ರಮದಂತೆ ಸೇವಿಸಿದರೆ ಚಿರಂಜೀವಿಯಾಗುವೆ ಮತ್ತು ಸಂಸಾರ ಸಮುದ್ರ

ಭದ್ರಂ ತೇ ಯತ್ತ್ವೇ ಮನಸಿ ರೋಚತೇ ॥೨೭॥ ಮಾರ್ಕಂಡೇಯೋ-
ಕ್ತಮಾರ್ಗೇಣ ಚಿರಂಜೀವೀ ಭವಿಷ್ಯಸಿ । ಸಂಸಾರಸಾಗರಾನ್ಮುಕ್ತೋ
ಮೋಕ್ಷ ಮಾರ್ಗಂ ಗಮಿಷ್ಯಸಿ ॥ ೨೮ ॥ ಮಾರ್ಕಂಡೇಯಸಹಾಯೇನ
ಸದಾ ತ್ವಂ ಸಂಚರ ದ್ವಿಜ । ತದಾರಭ್ಯ ಕೃತಾಚಾರ್ಯೆ ಇತಿ ಖ್ಯಾತಿ-
ರ್ಭವಿಷ್ಯತಿ ॥ ೨೯ ॥ ಇತ್ಯುಕ್ತ್ವಾಂತರ್ದಧೇ ದೇವಃ ಸುಬ್ರಹ್ಮಣ್ಯೋ
ದಯಾನಿಧಿಃ । ತತಃ ಪರಂ ದ್ವಿಜವರಃ ಸ್ವದೇಶಂ ಚ ಜಗಾಮಹಿ॥೩೦॥
ತಸ್ಮಾತ್ಸರ್ವಪ್ರಯತ್ನೇನ ಸುಬ್ರಹ್ಮಣ್ಯಂ ಭಜೇತ್ಸದಾ । ಮನೋರಥ-
ಫಲಂ ತಸ್ಯ ಜಾಯತೇ ನಾತ್ರ ಸಂಶಯಃ ॥ ೩೧ ॥

ಇತಿ ಶ್ರೀಸ್ಕಾಂದೇ ಶ್ರೀಸುಬ್ರಹ್ಮಣ್ಯಕ್ಷೇತ್ರಪುರಾಣೇ
ಏಕೋನವಿಂಶೋಽಧ್ಯಾಯಃ ॥ ೧೯ ॥

---

ವನ್ನು ದಾಟಿ ಮೋಕ್ಷವನ್ನು ಸೇರುವೆ. ಸಹಾಯಕರಾದ ಮಾರ್ಕಾಂಡೇಯ
ರೊಡನೆ ನಿತ್ಯದಲ್ಲಿಯೂ ಸಂಚರಿಸುತ್ತ, ಇಂದಿನಾರಭ್ಯ ಲೋಕದಲ್ಲಿ ಕೃತಾ
ಚಾರ್ಯನೆಂದು ಪ್ರಸಿದ್ಧಿಗೊಳ್ಳುವೆ" ಎಂದು ಅನುಗ್ರಹಿಸಿ ಆ ದಯಾನಿಧಿಯು
ಅದೃಶ್ಯನಾದನು. ಆ ಮೇಲೆ ಆ ಬ್ರಾಹ್ಮಣನು ತನ್ನ ದೇಶಕ್ಕೆ ತೆರಳಿದನು.
॥ ೩೦ ॥ ಆದುದರಿಂದ ಸರ್ವಪ್ರಯತ್ನದಿಂದಲಾದರೂ ನಿತ್ಯದಲ್ಲಿಯೂ
ಸುಬ್ರಹ್ಮಣ್ಯನನ್ನು ಸೇವಿಸಿದವನ ಇಷ್ಟಾರ್ಥವು ದೊರೆಯುವುದು; ಸಂಶಯ
ವಿಲ್ಲ". ॥ ೩೧ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು ॥ ೧೯ ॥

---

# ಅಥ ವಿಂಶೋऽಧ್ಯಾಯಃ

ಋಷಯ ಊಚುಃ—ಶ್ರೀಸ್ಕಂದ ಕವಚಂ ಸೂತ ವದ ಸರ್ವಾರ್ಥದಾಯಕಮ್। ಶೃಣ್ವತಾಂ ಸರ್ವಪಾಪಘ್ನಂ ಯದುಕ್ತಂ ಬ್ರಹ್ಮಣೇ ಪುರಾ ॥ ೧ ॥ ಶ್ರೀಸೂತ ಉವಾಚ—ಸ್ಕಂದಸ್ಯ ಕವಚಂ ವಕ್ಷ್ಯೇ ನೃಣಾಂ ರಕ್ಷಾಕರಂ ಪರಮ್ । ಪುರಾ ಪಿನಾಕಿನಾ ಪ್ರೋಕ್ತಂ ಬ್ರಹ್ಮಣೇऽನಂತಶಕ್ತಯೇ ॥ ೨ ॥ ತದಹಂ ತು ಪ್ರವಕ್ಷ್ಯಾಮಿ ಶೃಣುಧ್ವಂ ಸಾವಧಾನತಃ । ಸರ್ವಪ್ರಾಣಿಪ್ರಿಯಕರಂ ಸರ್ವಕಾಮಫಲಪ್ರದಮ್। ॥ ೩ ॥ ಮಂತ್ರಪ್ರಾಣಮಿದಂ ಜ್ಞೇಯಂ ಸರ್ವವಿದ್ಯೈಕಕಾರಣಮ್ । ಸ್ಕಂದಸ್ಯ ಕವಚಂ ದಿವ್ಯಂ ಪಠನಾದ್ವ್ಯಾಧಿನಾಶನಮ್ ॥ ೪ ॥ ಅಗ್ನಿಬಾಧಾಪ್ರಶಮನಂ ಚೋರೋಪದ್ರವನಾಶನಮ್ । ಪಿಶಾಚಭೂತರೋಗಾಣಾಂ ಪೀಡಾಶಾಂತಿಕರಂ ಪರಮ್ ॥ ೫ ॥ ಭೂಯಃ ಸಾಮ್ರಾಜ್ಯಂ ಸಂಪತ್ತಿರಂತೇ ಕೈವಲ್ಯಮಕ್ಷಯಮ್ । ದೀರ್ಘಾಯುಷ್ಯಂ ಭವೇತ್ತಸ್ಯ ಸ್ಕಂದಭಕ್ತಿಶ್ಚ ಜಾಯತೇ ॥ ೬ ॥ ಶಿವಾಂ ರಕ್ಷೇತ್ಕುಮಾರಶ್ಚ ಕಾರ್ತಿಕೇಯಃ ಶಿರೋऽವತು । ಲಲಾಟಂ

---

ಋಷಿಗಳೆಂದರು— "ಸೂತಪುರಾಣಿಕನೆ! ಸರ್ವ ಇಷ್ಟವನ್ನೀಯುವ ಶ್ರೀ ಸುಬ್ರಹ್ಮಣ್ಯಕವಚವನ್ನು ಹೇಳು. ಆ ಕವಚವು ಬ್ರಹ್ಮದೇವರಿಗೆ ಹೇಳಲ್ಪಟ್ಟು, ಕೇಳುವವರ ಪಾಪವನ್ನು ಪರಿಹರಿಸತಕ್ಕುದೆಂದು ಕೇಳಿರುವೆವು." ಸೂತರೆಂದರು—"ಪೂರ್ವದಲ್ಲಿ ರುದ್ರದೇವರಿಂದ ಬ್ರಹ್ಮದೇವರಿಗೆ ಉಪದೇಶಿಸಲ್ಪಟ್ಟ, ಮನುಷ್ಯರನ್ನು ಸಂರಕ್ಷಿಸುವ ಶ್ರೀ ಸುಬ್ರಹ್ಮಣ್ಯಕವಚವನ್ನು ಹೇಳುವೆನು. ಮನಸ್ಸಿಟ್ಟು ಕೇಳಿರಿ. ಈ ಕವಚವು ಸರ್ವ ಪ್ರಾಣಿಗಳಿಗೆ ಇಷ್ಟಕರವೂ, ಸರ್ವ ಇಷ್ಟಸಾಧಕವೂ, ಮಂತ್ರಗಳಿಗೆ ಪ್ರಾಣದಂತೆ ಶ್ರೇಷ್ಠವಾದುದೂ, ಸರ್ವ ವಿದ್ಯೆಗಳಿಗೆ ಕಾರಣವೂ, ಪಠಣಮಾಡಿದರೆ ವ್ಯಾಧಿನಾಶಕವೂ, ಅಗ್ನಿಪೀಡೆಯನ್ನೂ ಪರಿಹರಿಸತಕ್ಕುದೂ, ಕಳ್ಳರಬಾಧೆಯನ್ನು ನಿವಾರಿಸತಕ್ಕುದೂ, ಪಿಶಾಚ ರೋಗಾದಿ ಪೀಡೆಯನ್ನು ಶಾಂತ ಮಾಡತಕ್ಕುದೂ ಆಗಿರುತ್ತದೆ. ||೫|| ಈ ಕವಚದಿಂದ ಸಾಮ್ರಾಜ್ಯ ಸಂಪತ್ತೂ, ಮೋಕ್ಷವೂ, ಇಹದಲ್ಲಿ ದೀರ್ಘಾಯುಷ್ಯವೂ, ಸುಬ್ರಹ್ಮಣ್ಯನಲ್ಲಿ ಭಕ್ತಿಯೂ ಉಂಟಾಗುತ್ತವೆ. ಕುಮಾರನು ಜುಟ್ಟನ್ನೂ, ಕಾರ್ತಿಕೇಯನು ಶಿರಸ್ಸನ್ನೂ ಕಾಪಾಡಲಿ.

ಪಾರ್ವತೀಸೂನುರ್ಭ್ರುವೌ ಪುತ್ರಃ ಪಿನಾಕಿನಃ ॥ ೭ ॥ ನೇತ್ರೇ ವಕ್ತ್ರಂ ವಿಶಾಖಶ್ಚ ನಾಸಿಕಾಂ ಶಿಖಿವಾಹನಃ । ಕರ್ಣದ್ವಯಂ ಶಕ್ತಿಧರಃ ಕರ್ಣಮೂಲೇ ಷಡಾನನಃ ॥ ೮ ॥ ಕಪೋಲೌ ಚ ಮಹಾ-ಸೇನಸ್ತಾರಕಾರಿರ್ಹನುದ್ವಯಮ್ । ಓಷ್ಠದ್ವಯಂ ಚ ಸೇನಾನೀ ರಸನಾಂ ಶಿಖಿಕೇತನಃ ॥ ೯ ॥ ತಾಲುಂ ಕಲಾನಿಧಿಃ ಪಾತು ದಂತಾನ್ ದೇವಶಿಖಾಮಣಿಃ । ಗಾಂಗೇಯಶ್ಚಿಬುಕಂ ಪಾತು ಮುಖಂ ಪಾತು ಶಿವೋದ್ಭವಃ ॥೧೦॥ ಕಂಠಂ ಹರಸುತಃ ಪಾತು ಕಕ್ಷೌ ಕಾರುಣ್ಯ-ವಾರಿಧಿಃ । ಸ್ಕಂಧೌ ಮಮಾವತು ಸ್ಕಂದೋ ಬಾಹುಲೇಯೋ ಭುಜೌ ತಥಾ ॥ ೧೦ ॥ ಕರೌ ಭವೋದ್ಭವಃ ಪಾತು ಪಿಂಗಲಃ ಪಾತು ಚಾಂಗುಲೀಃ । ಷಾಣ್ಮಾತುರೋ ನಖಾನ್ ಪಾತು ಹೃದಯಂ ವಹ್ನಿಜೋಽವತು ॥ ೧೨ ॥ ಸುಬ್ರಹ್ಮಣ್ಯಃ ಸದಾ ಪಾತು ಸ್ತನೌ ಭೋಗೀ ಮಮೋದರಮ್ । ಮಧ್ಯಂ ಜಗದ್ಭರಃ ಪಾತು ನಾಭಿಂ ದ್ವಾದಶಲೋಚನಃ ॥ ೧೩ ॥ ಕಟಿಂ ದ್ವಿಷಡ್ಭುಜಃ ಪಾತು ಗುಹ್ಯಂ ಗಂಗಾಸುತೋಽವತು । ಜಘನಂ ಜಾಹ್ನವೀಸೂನುಃ ಪೃಷ್ಠಭಾಗಂ ಪರಂತಪಃ ॥ ೧೪ ॥ ಊರೂ ಪಾಯಾದುಮಾಪುತ್ರೋ ಜಾನು-

---

ಪಾರ್ವತೀಪುತ್ರನು ಹಣೆಯನ್ನೂ, ರುದ್ರಪುತ್ರನು ಹುಬ್ಬುಗಳನ್ನೂ, ವಿಶಾಖನು ಕಣ್ಣು-ಮುಖಗಳನ್ನೂ, ಮಯೂರವಾಹನನು ಮೂಗನ್ನೂ, ಶಕ್ತಿಧರನು ಕಿವಿಗಳನ್ನೂ ರಕ್ಷಿಸಲಿ. ಷಣ್ಮುಖನು ಕಿವಿಗಳ ಬುಡವನ್ನೂ, ಮಹಾಸೇನನು ಕೆನ್ನೆಗಳನ್ನೂ, ತಾರಕಾರಿಯು ದವಡೆಗಳನ್ನೂ, ಸೇನಾನಿಯು ತುಟಿಗಳನ್ನೂ ಸಲಹಲಿ. ಮಯೂರಧ್ವಜನು ನಾಲಿಗೆಯನ್ನೂ, ವಿದ್ಯೆಗಳಿಗೆ ನಿಧಿಯಾದ ಗುಹನು ತಾಲು-ನಾಲಿಗೆಯ ಮೇಲುಪ್ರದೇಶವನ್ನೂ, ದೇವಶ್ರೇಷ್ಠನು ಹಲ್ಲುಗಳನ್ನೂ, ಗಂಗಾಪುತ್ರನು ಗಲ್ಲವನ್ನೂ, ಶಿವಸುತನು ಬಾಯಿಯನ್ನೂ ಕಾಪಾಡಲಿ. ॥ ೧೦ ॥ ಹರಪುತ್ರನು ಕುತ್ತಿಗೆಯನ್ನೂ ದಯಾಸಿಂಧುವು ಕಂಕುಳನ್ನೂ, ಸ್ಕಂದನು ಹೆಗಲುಗಳನ್ನೂ, ಬಾಹುಲೇಯನು ತೋಳುಗಳನ್ನೂ, ರುದ್ರಪುತ್ರನು ಕೈಗಳನ್ನೂ, ಪಿಂಗಳನು ಬೆರಳುಗಳನ್ನೂ ಕಾಪಾಡಲಿ. ಷಾಣ್ಮಾತುರನು ಉಗುರುಗಳನ್ನೂ. ಅಗ್ನಿಪುತ್ರನು ಎದೆಯನ್ನೂ, ಸುಬ್ರಹ್ಮಣ್ಯನು ಮೊಲೆಗಳನ್ನೂ, ಸರ್ಪಾಕಾರನು ಹೊಟ್ಟೆಯನ್ನೂ, ಜಗತ್ತನ್ನು ಧರಿಸಿದವನು ಮಧ್ಯವನ್ನೂ, ಹನ್ನೆರಡು ಕಣ್ಣಿನವನು ಹೊಕ್ಕುಳನ್ನೂ ಟೊಂಕವನ್ನೂ ರಕ್ಷಿಸಲಿ. ಗಂಗಾಪುತ್ರನು ಗುಹ್ಯಪ್ರದೇಶವನ್ನೂ, ಜಾಹ್ನವೀಸೂನುವು ಸೊಂಟದ ಇದಿರುಭಾಗವನ್ನೂ. ಪರಂತ

ಯುಗ್ಮಂ ಜಗದ್ಧಿತಃ । ಜಂಘೇ ಪಾತು ಜಗತ್ಪೂಜ್ಯಃ ಪಾತು ಗುಲ್ಫೌ ಮಹಾಬಲಃ ॥ ೧೫ ॥ ಪಾದೌ ಪಾತು ಪರಂಜ್ಯೋತಿಃ ಸರ್ವಾಂಗಂ ಕುಕ್ಕುಟಧ್ವಜಃ । ಪಾರ್ಶ್ವಯೋಃ ಪಾತು ಪಾಪಘ್ನಃ ಸರ್ವತಃ ಪಾತು ಶಂಭುಜಃ ॥ ೧೬ ॥ ಪ್ರಾತಃಕಾಲೇ ಪರಂಬ್ರಹ್ಮ ಮಧ್ಯಾಹ್ನೇ ಯುದ್ಧ-ಕೌಶಲೀ । ಅಪರಾಹ್ನೇ ಗುಹಃ ಪಾತು ರಾತ್ರೌ ದೈತ್ಯಾಂತ-ಕೋಽವತು ॥ ೧೭ ॥ ತ್ರಿಸಂಧ್ಯಾಯಾಂ ತ್ರಿಕಾಲಜ್ಞೋ ಹ್ಯಂತಸ್ಸ್ಥಂ ಪಾತ್ವರಿಂದಮಃ । ಬಹಿಸ್ಸ್ಥಂ ಪಾತು ಮಾಂ ಖಡ್ಗೀ ನಿಷಣ್ಣಂ ಕೃತ್ತಿಕಾಸುತಃ ॥೧೮॥ ವ್ರಜಂತಂ ಪ್ರಮಥಾಧೀಶಸ್ತಿಷ್ಠಂತಂ ಪಾತು ಪಾಶಭೃತ್ । ಶಯಾನಂ ಪಾತು ಮಾಂ ಶೂರೋ ಮಾರ್ಗೇ ಮಾಂ ಪಾತು ಶೂಲಭೃತ್ ॥ ೧೯ ॥ ದುರ್ಗಾರಣ್ಯೇ ವ್ರಜಧರಃ ಸದಾ ರಕ್ಷತು ಮಾಂ ವಟುಃ । ಸುಬ್ರಹ್ಮಣ್ಯಸ್ಯ ಕವಚಂ ಧರ್ಮ ಕಾಮಾ-ರ್ಥಮೋಕ್ಷದಂ ॥ ೨೦ ॥ ಮಂತ್ರಾಣಾಂ ಪರಮೋ ಮಂತ್ರೋ ರಹಸ್ಯಂ ಸರ್ವದೇಹಿನಾಮ್ । ಸರ್ವರೋಗಪ್ರಶಮನಂ ಸರ್ವಪಾಪ-ಪ್ರಣಾಶನಮ್ ॥ ೨೧ ॥ ಸರ್ವಪುಣ್ಯಪ್ರದಂ ಸದ್ಯಃ ಸರ್ವದುಃಖವಿ-ಮೋಚನಮ್।ಸರ್ವಬಾಧಾಪ್ರಶಮನಂ ಸರ್ವವಿಘ್ನಭಯಾಪಹಮ್॥

---

ಪನು ಬೆನ್ನನ್ನೂ, ಉಮಾಪುತ್ರನು ತೊಡೆಗಳನ್ನೂ, ಜಗತ್ತಿಗೆ ಹಿತನು ಮೊಣಕಾಲನ್ನೂ, ಜಗತ್ಪೂಜ್ಯನು ಕಣಕಾಲುಗಳನ್ನೂ, ಮಹಾಬಲನು ಕಾಲುಮಣಿಗಂಟುಗಳನ್ನೂ ಸಲಹಲಿ. ॥ ೧೫ ॥ ಪರಂಜ್ಯೋತಿಯು ಕಾಲುಗಳನ್ನೂ ಕುಕ್ಕುಟಧ್ವಜನು ಸರ್ವಾಂಗಗಳನ್ನೂ, ಪಾಪನಾಶಕನು ಪಾರ್ಶ್ವಗಳಲ್ಲಿ, ಶಂಭುಪುತ್ರನು ಎಲ್ಲ ಕಡೆಗಳಲ್ಲಿಯೂ. ಪರಬ್ರಹ್ಮನು ಮುಂಜಾನೆ, ಯುದ್ಧಚತುರನು ಮಧ್ಯಾಹ್ನದಲ್ಲಿ, ಗುಹನು ಸಂಜೆಯಲ್ಲಿ, ದೈತ್ಯಸಂಹಾರಿಯು ರಾತ್ರಿಯಲ್ಲಿ, ತ್ರಿಕಾಲಜ್ಞಾನಿಯು ತ್ರಿಸಂಧ್ಯೆಯಲ್ಲಿ, ಅರಿಂದಮನು ಒಳಗಿರುವಾಗಲೂ, ಖಡ್ಗಿಯು ಹೊರಗಿರುವಾಗಲೂ, ಕೃತ್ತಿಕಾಪುತ್ರನು ಕುಳಿತಿರುವಾಗಲೂ, ಪ್ರಮಥಾಧೀಶನು ನಡೆಯುವವನನ್ನು, ಪಾಶಧರನು ನಿಂತಿರುವಾಗಲೂ, ಶೂರನು ಮಲಗಿರುವಾಗಲೂ, ಶೂಲಧರನು ದಾರಿಯಲ್ಲಿಯೂ, ವಜ್ರಧರನು ಗೊಂಡಾರಣ್ಯದಲ್ಲಿಯೂ ನನ್ನನ್ನು ಕಾಪಾಡಲಿ". ಈ ಸುಬ್ರಹ್ಮಣ್ಯ ಕವಚವು ಧರ್ಮ-ಕಾಮ-ಅರ್ಥ-ಮೋಕ್ಷಗಳನ್ನು ಕೊಡತಕ್ಕುದ್ದು. ॥ ೨೦ ॥ ಮಂತ್ರಗಳಲ್ಲಿ ಶ್ರೇಷ್ಠ ಮಂತ್ರವು, ಸರ್ವಪ್ರಾಣಿಗಳಿಗೂ ಗೋಪ್ಯವಾದುದು, ಸರ್ವರೋಗನಾಶಕರವು, ಸರ್ವಪಾಪಪರಿಹಾರಕರವು, ಸರ್ವಪುಣ್ಯವನ್ನೀಯ

॥೨೨॥ ಸರ್ವಸಿದ್ಧಿಪ್ರದಂ ಸದ್ಯೋ ಭೋಗೈಶ್ವರ್ಯವಿವರ್ಧನಮ್ ।
ಸರ್ವತ್ರ ಶುಭದಂ ನಿತ್ಯಂ ಯಃ ಪಠೇದ್ವಜ್ರಪಂಜರಮ್ ॥ ೨೩ ॥
ಸುಬ್ರಹ್ಮಣ್ಯಸ್ತು ಸುಪ್ರೀತೋ ವಾಂಛಿತಾರ್ಥಂ ಪ್ರಯಚ್ಛತಿ ।
ದೇಹಾಂತೇ ಮುಕ್ತಿಮಾಪ್ನೋತಿ ಸ್ಕಂದವರ್ಮಪ್ರಭಾವತಃ ॥ ೨೪ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ವಿಂಶೋಽಧ್ಯಾಯಃ ॥ ೨೦ ॥

---

## ಅಥ ಏಕವಿಂಶೋಽಧ್ಯಾಯಃ

ಋಷಯ ಊಚುಃ–ಷೋಡಶಾನಿ ಚ ನಾಮಾನಿ ಸ್ಕಂದಸ್ಯೈವ ಮಹಾತ್ಮನಃ। ಅಸ್ಮಾಕಂ ವದ ಸರ್ವಜ್ಞ ಲೋಕಾನಾಂ ಚ ಹಿತಾಪ್ತಯೇ
॥೧॥ ಶ್ರೀಸೂತ ಉವಾಚ–ಷಡ್ವಕ್ತ್ರಂ ಶಿಖಿವಾಹನಂ ತ್ರಿನಯನಂ

---

ತಕ್ಕುದು. ತತ್ಕ್ಷಣದಲ್ಲಿ ಸರ್ವ ದುಃಖವನ್ನು ಪರಿಹರಿಸತಕ್ಕುದು, ಸರ್ವ ಪೀಡಾನಿವಾರಕವು, ಸಮಸ್ತ ವಿಘ್ನಭಯವನ್ನು ಪರಿಹರಿಸತಕ್ಕುದು, ಸರ್ವ ಫಲಸಿದ್ಧಿಯನ್ನೀಯತಕ್ಕುದು, ಕೂಡಲೇ ಭೋಗಸಂಪತ್ತುಗಳನ್ನು ವೃದ್ಧಿ ಮಾಡತಕ್ಕುದು, ಸರ್ವತ್ರಯದಲ್ಲಿಯೂ ಮಂಗಲವನ್ನೀಯತಕ್ಕುದು. ಇಂತಹ ವಜ್ರಪಂಜರದಂತಿರುವ ಕವಚವನ್ನು ನಿತ್ಯದಲ್ಲಿಯೂ ಪಠಿಸತಕ್ಕವನಿಗೆ, ಪ್ರಸನ್ನನಾದ ಸುಬ್ರಹ್ಮಣ್ಯನು ಇಷ್ಟಾರ್ಥವನ್ನೀಯುವನು. ಕೊನೆಯಲ್ಲಿ ಈ ಕವಚದ ಸಾಮರ್ಥ್ಯದಿಂದ ಪುರುಷನು ಮೋಕ್ಷವನ್ನೇ ಹೊಂದುವನು".
॥ ೨೪ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು ॥ ೨೦ ॥

---

ಋಷಿಗಳೆಂದರು—"ಸರ್ವಜ್ಞನಾದ ಸೂತಪುರಾಣಿಕನೆ! ಜನರ ಹಿತಕ್ಕಾಗಿ ಮಹಾತ್ಮನಾದ ಸುಬ್ರಹ್ಮಣ್ಯನ ೧೬ ನಾಮಸ್ತೋತ್ರವನ್ನು ಹೇಳು". ಸೂತರೆಂದರು—"ಆರು ಮುಖದವನು, ನವಿಲನ್ನೇರಿದವನು, ಮೂರು ಕಣ್ಣಿ

ಚಿತ್ರಾಂಬರಾಲಂಕೃತಂ ಶಕ್ತಿಂ ವಜ್ರಮಥೋತ್ರಿ ಶೂಲಮಭಯಂ ಖೇಟಂ ಧನುಃ ಸ್ವಸ್ತಿಕಂ । ಪಾಶಂ ಕುಕ್ಕುಟಮಂಕುಶಂ ಚ ವರದಂ ದೋರ್ಭಿರ್ದಧಾನಂ ಸದಾ ಧ್ಯಾಯೇದೀಪ್ಸಿತಸಿದ್ಧಿದಂ ಶಿವಸುತಂ ಸ್ಕಂದಂ ಸುರಾರಾಧಿತಮ್ ॥ ೨ ॥ ಸುಬ್ರಹ್ಮಣ್ಯಂ ಪ್ರಣಮ್ಯಾಹಂ ಸರ್ವಜ್ಞಂ ಸರ್ವದಂ ಸದಾ । ಅಭೀಪ್ಸಿತಫಲ ಸಿದ್ಧ್ಯರ್ಥಂ ಪ್ರವಕ್ಷ್ಯೇ ನಾಮಷೋಡಶ ॥೩॥ ಪ್ರಥಮೋ ಜ್ಞಾನದಾತಾಚ ದ್ವಿತೀಯಃ ಸ್ಕಂದ ಏವ ಚ।ಅಗ್ನಿಗರ್ಭಸ್ತೃತೀಯಸ್ತು ಬಾಹುಲೇಯಶ್ಚತುರ್ಥಕಃ ॥೪॥ ಗಾಂಗೇಯಃ ಪಂಚಮಃ ಪ್ರೋಕ್ತಃ ಷಷ್ಠಃ ಶರವಣೋದ್ಭವಃ।ಸಪ್ತಮಃ ಕಾರ್ತಿಕೇಯಸ್ತು ಕುಮಾರಶ್ಚಾಷ್ಟಮಸ್ತಥಾ॥೫॥ ನವಮಃ ಷಣ್ಮುಖಶ್ಚೋಕ್ತೋ ದಶಮಸ್ತಾರಕಾಂತಕಃ । ಏಕಾದಶಶ್ಚ ಸೇನಾನೀರ್ಗುಹೋದ್ವಾದಶ ಏವ ಚ ।೬॥ ತ್ರಯೋದಶೋ ಬ್ರಹ್ಮಚಾರೀ ಶಿವವೀರ್ಯಶ್ಚತುರ್ದಶಃ । ಕ್ರೌಂಚದಾರೀ ಪಂಚದಶಃ ಷೋಡಶಃ ಶಿಖಿವಾಹನಃ ॥ ೭ ॥ ಏವಂ ಷೋಡಶನಾಮಾನಿ ಜಪೇತ್ಸಂಧ್ಯಾಸು ನಾರದ । ಬೃಹಸ್ಪತಿಸಮೋ ವಾಗ್ಮೀ ಬ್ರಹ್ಮತೇಜಾ ಭವೇದ್ಧ್ರುವಮ್ ॥ ೮ ॥

---

ನವನು, ಚಿತ್ರವಸ್ತ್ರವನ್ನುಟ್ಟವನು, ಶಕ್ತಿ–ವಜ್ರ–ತ್ರಿಶೂಲಿ–ಅಭಯ–ಖೇಟ–ಧನು–ಸ್ವಸ್ತಿಕ–ಪಾಶ–ಕುಕ್ಕುಟ – ಅಂಕುಶ – ವರದ ಈ ಆಯುಧ ಮತ್ತು ಮುದ್ರೆಗಳನ್ನು ಕೈಗಳಲ್ಲಿ ಧರಿಸಿದವನು, ಇಷ್ಟಾರ್ಥವನ್ನೀಯುವವನು, ದೇವಾಧಿಪತಿಯೂ ಆದ ಶಿವಪುತ್ರನಾದ ಸುಬ್ರಹ್ಮಣ್ಯನನ್ನು ಧ್ಯಾನಮಾಡಬೇಕು. ಸರ್ವಜ್ಞನೂ ಸರ್ವವನ್ನು ಕೊಡತಕ್ಕವನೂ ಆದ ಸುಬ್ರಹ್ಮಣ್ಯನನ್ನು ವಂದಿಸಿ, ಇಷ್ಟಾರ್ಥಸಿದ್ಧಿಗೋಸ್ಕರ ಹದಿನಾರು ನಾಮಗಳನ್ನು ಹೇಳುವೆನು. ೧. ಜ್ಞಾನ ಕೊಡುವವನು, ೨. ಸ್ಕಂದನು, ೩. ಅಗ್ನಿಗರ್ಭನು, ೪. ಬಾಹುಲೇಯ, ೫. ಗಾಂಗೇಯ, ೬. ಬಿದಿರಿನ ಕಾಡಿನಲ್ಲಿ ಜನಿಸಿದವನು, ೭. ಕಾರ್ತಿಕೇಯ, ೮. ಕುಮಾರ, ॥ ೫ ॥ ೯. ಷಣ್ಮುಖ, ೧೦. ತಾರಕಾಂತಕ, ೧೧. ಸೇನಾನಿ, ೧೨. ಗುಹ, ೧೩. ಬ್ರಹ್ಮಚಾರಿ, ೧೪. ಶಿವವೀರ್ಯ, ೧೫. ಕ್ರೌಂಚಾದ್ರಿಭೇದಕನು, ೧೬. ಮಯೂರವಾಹನ. ನಾರದನೆ! ಈ ಹದಿನಾರು ನಾಮಗಳನ್ನು ಸಂಧ್ಯಾಕಾಲದಲ್ಲಿ ಜಪಿಸಿದವನು ಸಾಕ್ಷಾತ್ ಬೃಹಸ್ಪತಿಗೆ ಸಮಾನನಾಗಿ ಬ್ರಹ್ಮತೇಜಸ್ಸನ್ನು ಪಡೆಯುವನು. ಕನ್ಯಾಪೇಕ್ಷಿಯು ಕನ್ಯೆಯನ್ನೂ, ಜ್ಞಾನಾಪೇಕ್ಷಿಯು ಜ್ಞಾನವನ್ನೂ, ವಿದ್ಯಾಪೇಕ್ಷಿಯು ವಿದ್ಯೆಯನ್ನೂ, ಧನಾಪೇಕ್ಷಿಯು ದ್ರವ್ಯವನ್ನೂ, ಮೋಕ್ಷಾಪೇಕ್ಷಿಯು ಮೋಕ್ಷವನ್ನೂ ಸುಬ್ರಹ್ಮಣ್ಯನ ಅನು

ಸುಬ್ರಹ್ಮಣ್ಯ ಷೋಡಶನಾಮ

ಕನ್ಯಾರ್ಥೀ ಲಭತೇ ಕನ್ಯಾಂ ಜ್ಞಾನಾರ್ಥೀ ಜ್ಞಾನಮಾಪ್ನುಯಾತ್ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಮ್ ॥ ೯ ॥
ಮೋಕ್ಷಾರ್ಥೀ ಮೋಕ್ಷ ಮಾಪ್ನೋತಿ ಸ್ಕಂದಸ್ಯೈವ ಪ್ರಸಾದತಃ ।
ಯತ್ಪ್ರಾರ್ಥಯಂತೇಮರ್ತ್ಯಾ ಸ್ತೇ ತತ್ತತ್ಸರ್ವಾರ್ಥ ಮಾಪ್ನುಯುಃ
॥ ೧೦ ॥ ಸುಬ್ರಹ್ಮಣ್ಯ ನಮಸ್ತುಭ್ಯಂ ಸುರಸೇನಾಗ್ರಗಾಮಿನೇ ॥
ಈಶ್ವರಪ್ರಿಯಪುತ್ರಾಯ ಶೂರ ತಾರಕಶತ್ರವೇ ॥ ೧೦ ॥ ಇತಿ
ಸಂಪ್ರಾರ್ಥ್ಯ ದೇವೇಶಂ ಸರ್ವಾಭೀಷ್ಟ ಪ್ರದಂನೃಣಾಮ್ । ಜಪೇತ್
ಷೋಡಶನಾಮಾನಿ ಶುಚಿರ್ಭೂತ್ವಾ ನಿರಂತರಮ್ ॥ ೧೨ ॥

ಇತಿ ಶ್ರೀಸ್ಕಾಂದೇ ಶ್ರೀಸುಬ್ರಹ್ಮಣ್ಯಕ್ಷೇತ್ರಪುರಾಣೇ
ಏಕವಿಂಶೋಧ್ಯಾಯಃ ॥ ೨೧ ||

---

ಗ್ರಹದಿಂದ ಹೊಂದುವರು. ಮನುಷ್ಯರು ಅಪೇಕ್ಷಿಸಿದುದನ್ನೆಲ್ಲ ಹೊಂದುವರು. || ೧೦ || 'ದೇವತೆಗಳ ಸೇನಾಪತಿಯಾದ, ಮಹೇಶ್ವರನ ಪ್ರಿಯಪುತ್ರನಾದ, ಶೂರ-ತಾರಕರೆಂಬ ಅಸುರರನ್ನು ಸಂಹರಿಸಿದ ಸುಬ್ರಹ್ಮಣ್ಯನೆ! ನಿನಗೆ ವಂದನೆ' ಎಂದು ಇಷ್ಟಾರ್ಥವನ್ನು ಕೊಡುವ ದೇವಶ್ರೇಷ್ಠನಾದ ಸುಬ್ರಹ್ಮಣ್ಯನನ್ನು ಪ್ರಾರ್ಥಿಸಿ, ಶುಚಿರ್ಭೂತನಾಗಿ ನಿತ್ಯದಲ್ಲಿಯೂ ಸುಬ್ರಹ್ಮಣ್ಯ ಷೋಡಶನಾಮ ಸ್ತೋತ್ರವನ್ನು ಪಠಿಸಬೇಕು" ॥ ೧೨ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು || ೨೧ ||

## ಅಥ ದ್ವಾವಿಂಶೋಽಧ್ಯಾಯಃ

ಋಷಯ ಊಚುಃ—ಸೂತ ಸೂತ ಮಹಾಭಾಗ ಸರ್ವಜ್ಞ ಕರುಣಾಕರ। ಷಣ್ಮುಖಾಷ್ಟೋತ್ತರಶತಂ ವದಾಸ್ಮಾಕಂ ಮಹಾಮತೇ॥ ॥ ೧ ॥ ಶ್ರೀಸೂತ ಉವಾಚ—ಶೃಣುಧ್ವಮೃಷಯೋ ಯೂಯಂ ನೈಮಿಷಾರಣ್ಯವಾಸಿನಃ । ಅಪೃಚ್ಛನ್ನಾರದೋ ನತ್ವಾ ಸುಬ್ರಹ್ಮಣ್ಯಾನುಕೀರ್ತನಮ್ ॥ ೨ ॥ ಅಷ್ಟೋತ್ತರಶತಂ ನಾಮ ರೋಗನಾಶೈಕಕಾರಣಮ್ । ಪರಾತ್ಪರಮೃಷಿಶ್ರೇಷ್ಠ ಮುವಾಚಾಂಬುಜವಿಷ್ಟರಃ ॥ ॥ ೩ ॥ ಶೃಣು ವಕ್ಷ್ಯಾಮಿ ದೇವರ್ಷೇ ಸ್ಕಂದಸ್ಯಾಷ್ಟೋತ್ತರಂ ಶತಮ್ । ಇಷ್ಟಸಿದ್ಧಿಕರಂ ಪುಣ್ಯಂ ಕುಷ್ಠೋಪದ್ರವನಾಶನಮ್ ॥ ॥ ೪ ॥ ಷಣ್ಮುಖಸ್ಯ ಪ್ರಿಯತಮಂ ತುಷ್ಟಿದಂ ಪುಷ್ಟಿವರ್ಧನಮ್ । ಸಮಸ್ತಶುಭದಂ ಸರ್ವಫಲದಂ ಪಾಪನಾಶನಮ್ ॥೫॥ ದ್ವಿಷಡ್ಭುಜಂ ಷಣ್ಮುಖಮಂಬಿಕಾಸುತಂ ಕುಮಾರಮಾದಿತ್ಯಸಮಾನತೇಜಸಮ್ । ವಂದೇ ಮಯೂರಾಸನಮಗ್ನಿಸಂಭವಂ ಧ್ಯಾಯಾಮಿ ಸೇನಾನ್ಯಮಭೀಷ್ಟಸಿದ್ಧಯೇ ॥ ೬ ॥ ಓಂ ಸ್ಕಂದೋ ಗುಹಃ ಷಣ್ಮುಖಶ್ಚ ಫಾಲನೇತ್ರಸುತಃ ಪ್ರಭುಃ । ಪಿಂಗಳಃ ಕೃತ್ತಿಕಾಸೂನುಃ ಶಿಖಿವಾಹೋ

---

ಋಷಿಗಳೆಂದರು—“ಕೃಪಾಳುವಾದ, ಸರ್ವಜ್ಞನಾದ ಸೂತಪುರಾಣಿಕನೆ! ಸುಬ್ರಹ್ಮಣ್ಯನ ಅಷ್ಟೋತ್ತರಶತನಾಮಸ್ತೋತ್ರವನ್ನು ಹೇಳು”. ಸೂತರೆಂದರು—“ನೈಮಿಷಾರಣ್ಯವಾಸಿಗಳಾದ ಮುನಿಗಳಿರಾ! ಪೂರ್ವದಲ್ಲಿ ನಾರದ ಮುನಿಯು ಚತುರ್ಮುಖ ಬ್ರಹ್ಮನಿಗೆ ವಂದಿಸಿ, “ಸುಬ್ರಹ್ಮಣ್ಯಾಷ್ಟೋತ್ತರಶತನಾಮಸ್ತೋತ್ರವನ್ನು ಹೇಳಿ”ಎಂದು ಪ್ರಾರ್ಥಿಸಲು, ಬ್ರಹ್ಮನು ದೇವರ್ಷಿಯೇ, ಸುಬ್ರಹ್ಮಣ್ಯಾಷ್ಟೋತ್ತರಶತನಾಮಸ್ತೋತ್ರವನ್ನು ಹೇಳುವೆನು, ಕೇಳು, ಈ ಸ್ತೋತ್ರವು ಇಷ್ಟಾರ್ಥವನ್ನು ಕೊಡುವುದು, ಪುಣ್ಯಕರವು, ಕುಷ್ಠಪೀಡಾಪರಿಹಾರಕವು, ಸುಬ್ರಹ್ಮಣ್ಯನಿಗೆ ಪ್ರೀತಿಕರವು, ಪಠಿಸುವವರಿಗೆ ದೇಹಪುಷ್ಟಿಯನ್ನು ಮಾಡತಕ್ಕುದು. ಸಮಸ್ತ ಮಂಗಳಫಲಗಳನ್ನಿತ್ತು ಪಾಪವನ್ನು ಪರಿಹರಿಸತಕ್ಕುದು. ॥ ೫ ॥ ಹನ್ನೆರಡು ತೋಳುಗಳೂ ಆರು ಮುಖಗಳೂ ಉಳ್ಳವನು, ಅಗ್ನಿಯಲ್ಲಿ ಹುಟ್ಟಿದವನು, ದೇವಸೇನಾಪತಿಯೂ ಆದ ಸುಬ್ರಹ್ಮಣ್ಯನನ್ನು ಇಷ್ಟಾರ್ಥ ಸಿದ್ಧಿಗೋಸ್ಕರ ಧ್ಯಾನ ಮಾಡುತ್ತೇನೆ

ದ್ವಿಷಡ್ಭುಜಃ ॥ ೭ ॥ ದ್ವಿಷಣ್ಣೇತ್ರಶ್ಶಕ್ತಿಧರಃ ಪಿಶಿತಾಶನಭಂಜನಃ । ತಾರಕಾಸುರಸಂಹರ್ತಾ ರಕ್ಷೋಬಲನಿಷೂದನಃ ॥ ೮ ॥ ಮತ್ತಃ ಪ್ರಮತ್ತ ಉನ್ಮತ್ತಃ ಸುರಸೈನ್ಯಸ್ಯ ರಕ್ಷಕಃ । ದೇವಸೇನಾಪತಿಃ ಪ್ರಾಜ್ಞಃ ಕೃಪಾಲುರ್ಭಕ್ತವತ್ಸಲಃ ॥ ೯ ॥ ಉಮಾಸುತೋ ಮಹಾ-ಸೇನಃ ಕುಮಾರಃ ಕ್ರೌಂಚದಾರಣಃ । ಸೇನಾನೀರಗ್ನಿಜನ್ಮಾ ಚ ವಿಶಾಖಃ ಶಂಕರಾತ್ಮಜಃ ॥ ೧೦ ॥ ಶಿವಸ್ವಾಮೀ ಗಣಸ್ವಾಮೀ ಸರ್ವಸ್ವಾಮೀ ಸನಾತನಃ । ಅಚಿಂತ್ಯಶಕ್ತಿರಕ್ಷೋಭ್ಯಃ ಪಾರ್ವತೀ-ಪ್ರಿಯನಂದನಃ ॥ ೧೧ ॥ ಗಂಗಾಸುತಃ ಶಿವೋದ್ಭೂತಃ ಆಹೂತಃ ಪಾವಕಾತ್ಮಜಃ । ಜೃಂಭಃ ಪ್ರಜೃಂಭ ಉಜ್ಜೃಂಭಃ ಕಮಲಾಸನ-ಸಂಸ್ತುತಃ ॥೧೨॥ ಏಕವರ್ಣೋ ದ್ವಿವರ್ಣಶ್ಚ ತ್ರಿವರ್ಣಶ್ಚ ಮನೋ-ಹರಃ । ಚತುರ್ವರ್ಣಃ ಪಂಚವರ್ಣಃ ಪ್ರಜಾಪತಿರಹರ್ಪತಿಃ ॥೧೩॥ ಅಗ್ನಿಗರ್ಭಃ ಶಮೀಗರ್ಭೋ ವಿಶ್ವರೇತಾಃ ಸುರಾರಿಹಾ । ಹರಿ-ದ್ವರ್ಣಃ ಶುಭಕರಃ ಪಟುಶ್ಚ ಪಟುವೇಶಧೃತ್ ॥ ೧೪ ॥ ಪೂಷಾ ಗಭಸ್ತಿಸತ್ತ್ವಸ್ಥಶ್ಚಂದ್ರವರ್ಣಕಲಾಧರಃ । ಮಾಯಾಧಾರೀ ಮಹಾಮಾಯೀ ಕೈವಲ್ಯಃ ಶಂಕರಾತ್ಮಜಃ ॥ ೧೫ ॥ ವಿಶ್ವಯೋನಿ-

---

೧ ಸ್ಕಂದ ೨ ಗುಹ ೩ ಷಣ್ಮುಖ ೪ ಫಾಲನೇತ್ರಸುತ ೫ ಪ್ರಭು ೬ ಪಿಂಗಲ ೭ ಕೃತ್ತಿಕಾಸೂನು ೮ ಶಿಖಿವಾಹನ ೯ ದ್ವಿಷಡ್ಭುಜ ೧೦ ದ್ವಿಷಣ್ಣೇತ್ರ ೧೧ ಶಕ್ತಿಧರ ೧೨ ಪಿಶಿತಾಶನಭಂಜನ ೧೩ ತಾರಕಾಸುರ ಸಂಹರ್ತಾ ೧೪ ರಕ್ಷೋಬಲನಿಷೂದನ ೧೫ ಮತ್ತ ೧೬ ಪ್ರಮತ್ತ ೧೭ ಉನ್ಮತ್ತ ೧೮ ಸುರ ಸೈನ್ಯಸ್ಯರಕ್ಷಕ ೧೯ ದೇವಸೇನಾಪತಿ ೨೦ ಪ್ರಾಜ್ಞ ೨೧ ಕೃಪಾಲು ೨೨ ಭಕ್ತವತ್ಸಲ ೨೩ ಉಮಾಸುತ ೨೪ ಮಹಾಸೇನ ೨೫ ಕುಮಾರ ೨೬ ಕ್ರೌಂಚದಾರಣ ೨೭ ಸೇನಾನಿ ೨೮ ಅಗ್ನಿಜನ್ಮಾ ೨೯ ವಿಶಾಖ ೩೦ ಶಂಕರಾತ್ಮಜ ॥ ೧೦ ॥ ೩೧ ಶಿವಸ್ವಾಮಿ ೩೨ ಗಣಸ್ವಾಮಿ ೩೩ ಸರ್ವಸ್ವಾಮಿ ೩೪ ಸನಾತನ ೩೫ ಅಚಿಂತ್ಯಶಕ್ತಿ ೩೬ ಅಕ್ಷೋಭ್ಯ ೩೭ ಪಾರ್ವತೀಪ್ರಿಯ ನಂದನ ೩೮ ಗಂಗಾಸುತ ೩೯ ಶಿವೋದ್ಭೂತ ೪೦ ಆಹೂತ ೪೧ ಪಾವ ಕಾತ್ಮಜ ೪೨ ಜೃಂಭ ೪೩ ಪ್ರಜೃಂಭ ೪೪ ಉಜ್ಜೃಂಭ ೪೫ ಕಮಲಾಸನ ಸಂಸ್ತುತ ೪೬ ಏಕವರ್ಣ ೪೭ ದ್ವಿವರ್ಣ ೪೮ ತ್ರಿವರ್ಣ ೪೯ ಮನೋಹರ ೫೦ ಚತುರ್ವರ್ಣ ೫೧ ಪಂಚವರ್ಣ ೫೨ ಪ್ರಜಾಪತಿ ೫೩ ಅಹರ್ಪತಿ ೫೪ ಅಗ್ನಿ ಗರ್ಭ ೫೫ ಶಮೀಗರ್ಭ ೫೬ ವಿಶ್ವರೇತಾ ೫೭ ಸುರಾರಿಹಾ ೫೮ ಹರಿದ್ವರ್ಣ

ರಮೇಯಾತ್ಮಾ ತೇಜೋನಿಧಿರನಾಮಯಃ । ಪರಮೇಷ್ಠೀ ಪರಬ್ರಹ್ಮ
ವೇದಗರ್ಭೋ ವಿರಾಟ್ಸುತಃ ॥ ೧೬ ॥ ಪುಲಿಂದಕನ್ಯಾಭರ್ತಾ ಚ
ಮಹಾಸಾರಸ್ವತಃ ಪ್ರಭುಃ । ಆಶ್ರಿತಾ ನಾಮಿಷ್ಟದಾತಾ ಚೋರಘ್ನೋ
ರೋಗನಾಶನಃ ॥ ೧೭ ॥ ಅನಂತಶಕ್ತಿರಾನಂದಃ ಶಿಖಂಡಿಕೃತಕೇತನಃ ।
ಡಂಭಃ ಪರಮಡಂಭಶ್ಚ ಮಹಾಡಂಭೋ ವೃಷಾಕಪಿಃ ॥ ೧೮ ॥
ಕಾರಣೋತ್ಪತ್ತಿದೇಹಶ್ಚ ಕಾರಣಾತೀತವಿಗ್ರಹಃ । ಅತಿರೂಪೋ
ವಿರೂಪಾಶ್ಚ ಪ್ರಾಣಾಯಾಮಪರಾಯಣಃ ॥ ೧೯ ॥ ವಿರುದ್ಧಹಂತಾ
ವೀರಘ್ನೋ ರಕ್ತವರ್ಣಸ್ಸುಲೋಚನಃ । ಬಹುವರ್ಣೋ ಗೋಪತಿಶ್ಚ
ವಸುದೇವವರಪ್ರದಃ ॥ ೨೦ ॥ ಸರ್ವೇಶ್ವರೋ ಲೋಕಗುರುರ್ನಶ್ವ-
ರಾಸುರಮರ್ದನಃ । ಸುಬ್ರಹ್ಮಣ್ಯೋ ಮಹಾಪ್ರೀತೋ ಬ್ರಾಹ್ಮಣೋ
ಬ್ರಾಹ್ಮಣಪ್ರಿಯಃ ॥ ೨೧ ॥ ಏವಮಷ್ಟೋತ್ತರಶತನಾಮಭಿಃ
ಪೂಜಿತೋ ಗುಹಃ । ಸರ್ವಾಭೀಷ್ಟಪ್ರದಾತಾ ಚ ಸುಪ್ರಸನ್ನೋ
ಭವಿಷ್ಯತಿ ॥ ೨೨ ॥ ಏವಮಷ್ಟೋತ್ತರಶತಂ ಜಪೇಚ್ಚೋರಾದಿ-
ಸಂಕುಲೇ । ರಾಜದ್ವಾರೇ ವಿವಾದೇ ಚ ಪ್ರತಿವಾದಿನಿ ವಾದಿನಿ ॥೨೩॥
ಭೂತವೇತಾಲಸರ್ಪಾದಿಬ್ರಹ್ಮರಾಕ್ಷಸಪೀಡನೇ । ತ್ರಿವಾರಂ ಜಾಪ
ಯೇದ್ವಿಪ್ರೈರ್ಗೃಹಭಕ್ತಿಸಮನ್ವಿತಃ ॥ ೨೪ ॥ ಭಸ್ಮಾಭಿಮಂತ್ರಣಂ

---

೫೯ ಶುಭಕರ ೬೦ ಪಟು ೬೧ ವಟುವೇಷಧೃತ್ ೬೨ ಪೂಷಾ ೬೩ ಗಭಸ್ತಿ ೬೪ ಸತ್ತ್ವಸ್ಥ ೬೫ ಚಂದ್ರವರ್ಣಕಲಾಧರ ೬೬ ಮಾಯಾಧಾರಿ ೬೭ ಮಹಾಮಾಯಿ ೬೮ ಕೈವಲ್ಯ ೬೯ ಶಂಕರಾತ್ಮಜ ॥ ೧೩ ॥ ೭೦ ವಿಶ್ವಯೋನಿ ೭೧ ಅಮೇಯಾತ್ಮಾ ೭೨ ತೇಜೋನಿಧಿ ೭೩ ಅನಾಮಯ ೭೪ ಪರಮೇಷ್ಠೀ ೭೫ ಪರಬ್ರಹ್ಮ ೭೬ ವೇದಗರ್ಭ ೭೭ ವಿರಾಟ್ಸುತ ೭೮ ಪುಲಿಂದಕನ್ಯಾಭರ್ತಾ ೭೯ ಮಹಾಸಾರಸ್ವತ ೮೦ ಪ್ರಭು ೮೧ ಆಶ್ರಿತಾನಾಮಿಷ್ಟದಾತಾ ೮೨ ಚೋರಘ್ನ ೮೩ ರೋಗನಾಶನ ೮೪ ಅನಂತಶಕ್ತಿ ೮೫ ಆನಂದ ೮೬ ಶಿಖಂಡಿಕೃತ ಕೇತನ ೮೭ ಡಂಭ ೮೮ ಪರಮಡಂಭ ೮೯ ಮಹಾಡಂಭ ೯೦ ವೃಷಾಕಪಿ ೯೧ ಕಾರಣೋತ್ಪತ್ತಿದೇಹ ೯೨ ಕಾರಣಾತೀತವಿಗ್ರಹ ೯೩ ಅತಿರೂಪ ೯೪ ಪ್ರಾಣಾಯಾಮಪರಾಯಣ ೯೫ ವಿರುದ್ಧಹಂತಾ ೯೬ ವೀರಘ್ನ ೯೭ ರಕ್ತವರ್ಣ ೯೮ ಸುಲೋಚನಾ ೯೯ ಬಹುವರ್ಣ ೧೦೦ ಗೋಪತಿ ೧೦೧ ವಸುದೇವವರಪ್ರದ ॥ ೨೦ ॥ ೧೦೨ ಸರ್ವೇಶ್ವರ ೧೦೩ ಲೋಕಗುರು ೧೦೪ ನಶ್ವರಾಸುರಮರ್ದನ ೧೦೫ ಸುಬ್ರಹ್ಮಣ್ಯ ೧೦೬ ಮಹಾಪ್ರೀತ ೧೦೭ ಬ್ರಾಹ್ಮಣ ೧೦೮

ಕುರ್ಯಾತ್ತದ್ಭಸ್ಮ ಪರಿಧಾರಯೇತ್ । ಭಸ್ಮಧಾರಣ ಮಾತ್ರೇಣ
ಸರ್ವಪಾಪಂ ವಿನಶ್ಯತಿ ॥೨೫॥ ಜಪಂತಂ ಪುರುಷಂ ದೃಷ್ಟ್ವಾ ಸರ್ವೇ
ಸರ್ಪಾದ್ಯುಪದ್ರವಾಃ । ಶೀತೋಷ್ಣಜ್ವರಪೀಡಾಶ್ಚ ನಶ್ಯಂತಿ ಜಪ-
ಮಾತ್ರತಃ ॥ ೨೬ ॥ ಸಂವತ್ಸರಜಪಾದಸ್ಮಾದಪಸ್ಮಾರೋ ವಿನಶ್ಯತಿ ।
ಷಣ್ಮಾಸಾತ್ಕುಷ್ಠರೋಗಶ್ಚ ಮುಚ್ಯತೇ ನಾತ್ರ ಸಂಶಯಃ ॥ ೨೭ ॥
ಆಯುರ್ವೃದ್ಧಿಕರಂ ಪುಣ್ಯಮಪಮೃತ್ಯುವಿನಾಶನಮ್।ಇಷ್ಟಾರ್ಥಾನ್
ಲಭತೇ ನಿತ್ಯಂ ಜಪಕಾರೀ ಪುಮಾನ್ ಸದಾ ॥ ೨೮ ॥ ಏವಂ
ನಾಮಾಷ್ಟಶತಕಂ ಜಪೇದ್ಭಕ್ತಿಸಮನ್ವಿತಃ। ತ್ರಿರಾವೃತ್ತ್ಯಾ ಪಠೇದ್ಯಸ್ತು
ಸ್ಕಂದಭಕ್ತಿಸಮನ್ವಿತಃ ॥ ೨೯ ॥ ಏತತ್ಸ್ತೋತ್ರಂ ಪಠೇದ್ಯಸ್ತು
ಸ್ಕಂದಭಕ್ತಿಸಮನ್ವಿತಃ । ಸುಪ್ರೀತಸ್ತಸ್ಯ ಸಾನ್ನಿಧ್ಯಂ ದದಾತಿ ಶಿಖಿ-
ವಾಹನಃ ॥ ೩೦ ॥ ಇದಂ ರಹಸ್ಯಂ ಪರಮಂ ಮಯಾ ಪ್ರೋಕ್ತಂ

---

ಬ್ರಾಹ್ಮಣಪ್ರಿಯ. ಹೀಗೆ ಅಷ್ಟೋತ್ತರ ಶತನಾಮಸ್ತೋತ್ರಗಳಿಂದ ಷಣ್ಮು
ಖನನ್ನು ಪೂಜಿಸಿದರೆ ಆ ದೇವನು ಪ್ರಸನ್ನನಾಗಿ ಇಷ್ಟಾರ್ಥವನ್ನೀಯು
ವನು. ಕಳ್ಳರು ತುಂಬಿದ ಸ್ಥಳದಲ್ಲಿ, ರಾಜನ ಮನೆಯ ಬಾಗಿಲಿನಲ್ಲಿ, ವಿವಾದ
ದಲ್ಲಿ, ಪ್ರತಿವಾದಿಯು ವಾದ ಮಾಡುವಲ್ಲಿ ಈ ಸ್ತೋತ್ರವನ್ನು ಪಠಿಸಬೇಕು.
ಭೂತ-ವೇತಾಳ-ಸರ್ಪ-ಬ್ರಹ್ಮರಾಕ್ಷಸ ಮೊದಲಾದವರ ಪೀಡೆಯೊದಗಿದಾಗ
ಈ ಸ್ತೋತ್ರವನ್ನು ಪಠಿಸಿದರೆ ಆ ಭಯ ಪರಿಹಾರವಾಗುವುದು. ಷಣ್ಮುಖನಲ್ಲಿ
ಭಕ್ತಿಯಿಂದ ಬ್ರಾಹ್ಮಣರ ಮೂಲಕ ಮೂರು ಸಲ ಈ ಸ್ತೋತ್ರವನ್ನು
ಪಠನೆ ಮಾಡಿಸಬೇಕು. ಈ ಸ್ತೋತ್ರದಿಂದ ಭಸ್ಮವನ್ನು ಮಂತ್ರಿಸಿ
ಹಚ್ಚಿಕೊಂಡ ಮಾತ್ರದಿಂದ ಸರ್ವಪಾಪವೂ ನಷ್ಟವಾಗುತ್ತದೆ. ॥ ೨೫ ॥
ಈ ಸ್ತುತಿಯಿಂದ ಜಪಿಸುವ ಪುರುಷನನ್ನು ಕಂಡು, ಸರ್ಪಾದಿಗಳ ಪೀಡೆಗಳೂ
ಶೀತಜ್ವರ ಉಷ್ಣಜ್ವರ ಮೊದಲಾದ ಪೀಡೆಗಳೂ, ಕುಷ್ಠರೋಗವೂ ನಿಸ್ಸಂಶಯ
ವಾಗಿ ನಷ್ಟವಾಗುವುವು. ಆಯುಸ್ಸಿಗೆ ವೃದ್ಧಿಕರವೂ, ಪುಣ್ಯಕರವೂ, ಅಪ
ಮೃತ್ಯುನಾಶಕವೂ ಆದ ಈ ಸ್ತೋತ್ರವನ್ನು ಜಪಿಸತಕ್ಕವನು ಇಷ್ಟಾರ್ಥ
ಗಳನ್ನು ಪಡೆಯುವನು. ಸುಬ್ರಹ್ಮಣ್ಯನಲ್ಲಿ ಭಕ್ತಿಯಿಂದ ಮೂರಾವರ್ತಿ ಈ
ಅಷ್ಟೋತ್ತರಶತನಾಮಸ್ತೋತ್ರವನ್ನು ಪಠಿಸಿದರೆ ಅಥವಾ ಜಪಿಸಿದರೆ, ಆ
ದೇವನು ಆತನಲ್ಲಿ ತನ್ನ ಸಾನಿಧ್ಯವನ್ನಿಡುವನು. ॥ ೩೦ ॥ ಮುನಿವರನಾದ

ತವಾನಘ । ಸಾಧನಂ ಸಂಪದಾಂ ಪುಂಸೋ ಮುಕ್ತಿದಂ ಮುನಿ-
ಪುಂಗವ ॥ ೩೧ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ದ್ವಾವಿಂಶೋಽಧ್ಯಾಯಃ ॥ ೨೨ ॥

## ಅಥ ತ್ರಯೋವಿಂಶೋಽಧ್ಯಾಯಃ

ಋಷಯ ಊಚುಃ—ಭೋಃ ಸೂತ ತವ ಸದ್ವಾಕ್ಯಂ ಶ್ರುತ್ವಾ ಸಂತೋಷಿಣೋ ವಯಮ್। ತಪಃಸ್ಥಲಂ ಪುಣ್ಯಕರಂ ಸ್ಥಲಾನಾಮು-ತ್ತಮೋತ್ತಮ್ ॥ ೧ ॥ ರುದ್ರಪಾದಸ್ಯ ಮಹಾತ್ಮ್ಯಂ ಕಥಯಸ್ವ ಮಹಾಮತೇ । ಶ್ರೀಸೂತ ಉವಾಚ—ವಕ್ಷ್ಯೇ ಕಥಾಂ ಮಹಾ ಪುಣ್ಯಾಂ ಕುಮಾರಸ್ಯ ಮಹಾತ್ಮನಃ । ಶಿವಸ್ಯ ಕರುಣಾಂ ದಿವ್ಯಾಂ ಶೃಣುಧ್ವಂ ಪಾಪಶಾಂತಯೇ ॥ ೨ ॥ ಪುರಾ ಸ್ಕಂದೋ ಮಹಾತೇಜಾಃ ಶ್ರೀರುದ್ರಂ ಪ್ರತಿ ತಪ್ತವಾನ್ । ತತ್ರಸ್ಥಿತ್ವಾ ಬಹುಯುಗಂ ಹತ್ವಾ ತಾರಕಮಗ್ರಜಮ್ ॥೩॥ ತೇನ ಪಾಪೇನಮಹತಾ ಶಂಕಿತೋ ಲೋ-ಕರಕ್ಷಕಃ। ತದಾ ದೇವಾಃ ಸಮಾಗತ್ಯ ಇಂದ್ರಾದ್ಯಾ ಲೋಕಪಾಲಕಾಃ

---

ನಾರದನೆ! ಅತಿ ಗೋಪ್ಯವಾದ ಈ ಸ್ತೋತ್ರವನ್ನು ನಿನಗೆ ಹೇಳಿದೆನು. ಇದು ಸಂಪತ್ತುಗಳಿಗೆ ಸಾಧನವೂ, ಮೋಕ್ಷಕ್ಕೆ ಕಾರಣವೂ ಆಗಿರುತ್ತದೆ" ಎಂದು ಬ್ರಹ್ಮನು ನಾರದನಿಗೆ ಉಪದೇಶಿಸಿದುದನ್ನು ನಿಮಗೆ ಹೇಳಿದೆನು. ॥ ೩೧ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು ॥ ೨೨ ॥

---

ಋಷಿಗಳೆಂದರು—"ಸೂತನೆ! ಈ ನಿನ್ನ ಶ್ರೇಷ್ಠ ವಚನವನ್ನು ಕೇಳಿ ಸಂತುಷ್ಟರಾದೆವು. ಸ್ಥಳಗಳಲ್ಲಿ ಅತ್ಯುತ್ತಮವಾದ ತಪಸ್ಸಿಗೆ ಯೋಗ್ಯವಾದ ರುದ್ರಪಾದಸ್ಥಳದ ಮಹಿಮೆಯನ್ನು ಹೇಳು" ಎನ್ನಲು, ಸೂತರೆಂದರು—"ಮಹಾತ್ಮನಾದ ಸುಬ್ರಹ್ಮಣ್ಯನ ಪುಣ್ಯಕರವಾದ ಕಥೆಯನ್ನು ಹೇಳುವೆನು. ಪಾಪಪರಿಹಾರಕ್ಕಾಗಿ ರುದ್ರದೇವರ ದಿವ್ಯವಾದ ಕೃಪೆಯ ವಿಷಯವನ್ನು ಕೇಳಿರಿ. ಸುಬ್ರಹ್ಮಣ್ಯಸ್ವಾಮಿಯು ಪೂರ್ವದಲ್ಲಿ ಬ್ರಾಹ್ಮಣನಾದ ತಾರಕಾಸುರನನ್ನು ಸಂಹರಿಸಿದ ಮಹಾಪಾಪಪರಿಹಾರಕ್ಕಾಗಿ ಅನೇಕ ಯುಗಗಳಲ್ಲಿ ಈ ರುದ್ರಪಾದ

॥ ೪ ॥ ವಸವೋಽಷ್ಟೌದ್ವಾದಶಾರ್ಕಾ ಬೃಹಸ್ಪತಿ ಪುರೋಗಮಾಃ ।
ಮನವೋ ಮನುಪುತ್ರಾಶ್ಚ ಸಿದ್ಧವಿದ್ಯಾಧರಾದಯಃ ॥ ೫ ॥ಸರ್ವೇ
ಸಂಪ್ರಾರ್ಥ್ಯ ಸನ್ಮಂತ್ರೈಸ್ತುಷ್ಟುವುಃ ಪುರುಷೋತ್ತಮಮ್ । ದೇವಾ
ಊಚುಃ–ನಮೋಽಸ್ತು ಶೇಷರೂಪಾಯ ಬಹುರೂಪಾಯ ತೇ ನಮಃ
॥೬॥ಕಾಮರೂಪಾಯ ಕಾಮಾಯ ಸರ್ವಕಾಮಪ್ರದಾಯಿನೇ।ಸುಬ್ರ
ಹ್ಮಣ್ಯಾಯ ವಟವೇ ಸುರಲೋಕಾದಿನಾಯಕ ॥ ೭ ॥ ಸೂಕ್ಷ್ಮ
ಸರ್ವಾತ್ಮನೇ ತುಭ್ಯಂ ನಮಃ ಸುಂದರಮೂರ್ತಯೇ । ಅಸ್ಮದರ್ಥಂ
ಹಿ ದೇವೇಶ ತಾರಕಾಸುರನಿಗ್ರಹಮ್॥೮॥ ಕೃತವಾಂಸ್ತೇನಚಾಸ್ಮಾಕಂ
ಸುಖಮಾಸೀನ್ಮಹಾಮತೇ। ಅಸ್ಮಾಭಿಸ್ತೇ ಕ್ರಿಯಾ ಕಾಪಿ ಕಾರ್ಯಾ
ವದ ಸುಲೋಚನ ॥ ೯ ॥ ಇತ್ಥಂ ಸ್ತುತೋಽಪಿ ದೇವೇಶಸ್ತಾನ್
ಪ್ರೋವಾಚ ನ ಕಿಂಚನ । ತದಾ ಗೌರೀಪತಿಃ ಶಂಭುಃ ಶಿವಃ ಪ್ರತ್ಯಕ್ಷ-
ತಾಂ ಗತಃ ॥ ೧೦ ॥ಕಿಮರ್ಥಂ ತಪ್ಯಸೇ ಹ್ಯತ್ರ ಸಂಗಮೇ ಲೋಕವಿ-
ಶ್ರುತೇ।ಇತಿ ಪೃಷ್ಟಸ್ತತಃ ಸ್ಕಂದೋ ರುದ್ರೇಣ ಚ ಮಹಾತ್ಮನಾ॥೧೧॥
ತಂ ಪ್ರತ್ಯಾಹ ಮಹಾದೇವಂ ಪಿತರಂ ಲೋಕನಾಯಕಮ್ । ಸ್ಕಂದ
ಉವಾಚ–ಭೋಃ ಸ್ವಾಮಿನ್ ಶೃಣು ಮದ್ವಾಕ್ಯಂ ದಯಾ ಚೇದಸ್ತಿ

---

ಸ್ಥಳದಲ್ಲಿ ನಿಂತು ರುದ್ರದೇವರನ್ನು ಕುರಿತು ತಪಸ್ಸುಮಾಡುತ್ತಿದ್ದನು. ಆಗ ಇಂದ್ರಾದಿ ದಿಕ್ಪಾಲಕರು, ಅಷ್ಟವಸುಗಳು, ದ್ವಾದಶಾದಿತ್ಯರು, ಬ್ರಹಸ್ಪತಿ ಮೊದಲಾದವರು, ಮನುಗಳು, ಮನುಪುತ್ರರು, ಸಿದ್ಧರು, ವಿದ್ಯಾಧರಾದಿಗಳು, ॥ ೫ ॥ ಎಲ್ಲರೂ ಅಲ್ಲಿಗೆ ಬಂದು ಉತ್ತಮ ಮಂತ್ರಗಳಿಂದ ಸ್ತುತಿಸಿದರು — 'ಶೇಷಸ್ವರೂಪನೂ, ಬಹುರೂಪನೂ, ಇಷ್ಟರೂಪಧಾರಿಯೂ, ಸರ್ವ ಇಷ್ಟದಾಯಕನೂ, ಮನ್ಮಥರೂಪನೂ ಆದ ಸುಬ್ರಹ್ಮಣ್ಯನೆ! ದೇವಸೇನಾಪತಿಯಾದ, ಬ್ರಹ್ಮಚಾರಿಯಾದ, ಸರ್ವಾಂತರ್ಯಾಮಿಯಾದ ನಿನಗೆ ವಂದನೆ. ನಮ್ಮ ಅನುಗ್ರಹಕ್ಕಾಗಿ ತಾರಕಾಸುರನನ್ನು ಸಂಹರಿಸಿದ ಕಾರಣ ನಮಗೆ ಸುಖವಾಗಿರುವುದು. ಆದುದರಿಂದ ನಿನ್ನ ಪ್ರೀತಿಗಾಗಿ ಯಾವ ಕಾರ್ಯವನ್ನು ನಾವು ಮಾಡತಕ್ಕದೆಂದು ಹೇಳು' ಎಂದು ಸ್ತುತಿಸಿದರೂ ಸುಬ್ರಹ್ಮಣ್ಯನು ಏನೊಂದನ್ನೂ ಹೇಳದಿರಲು, ಪಾರ್ವತಿಪತಿಯಾದ ಶಿವನು ಪ್ರತ್ಯಕ್ಷನಾಗಿ ॥ ೧೦ ॥ 'ವತ್ಸನೆ! ಸಂಗಮಸ್ಥಳವೆಂದು ಪ್ರಸಿದ್ಧವಾದ ಈ ಸ್ಥಳದಲ್ಲಿ ಏತಕ್ಕಾಗಿ ತಪಸ್ಸು ಮಾಡುತ್ತಿರುವೆ'? ಎಂದು ಕೇಳಲು, ಲೋಕಾಧಿಪತಿಯಾದ ಆ ದೇವನನ್ನು ಕುರಿತು ಸುಬ್ರಹ್ಮಣ್ಯನು ಹೀಗೆಂದನು—

ತೇ ಮಯಿ ||೧೨|| ಋಷ್ಯಶೃಂಗಾದ್ರಿಭಾಗೇ ತು ನದೀ ತೀರೇ ವಿಶೇಷತಃ | ವಾಸಂ ಕರೋಮಿ ದೇವೇಶ ಸರ್ವೇಷಾಮುಪಕಾರಕಃ ||೧೩|| ಅನ್ನದಾನಂ ಕರಿಷ್ಯಾಮಿ ಸರ್ವೇಷಾಂ ಪ್ರಾಣಿನಾಂ ಸದಾ | ಜನಾನಾಂ ರೋಗನಾಶಂ ಚ ಉಚ್ಛಿಷ್ಟೋಪರಿಶಾಯಿನಾಮ್ || ೧೪ || ಭೂತ-ಪ್ರೇತಪಿಶಾಚಾಶ್ಚ ನಶ್ಯಂತಿ ಮಮ ಶಾಸನಾತ್ | ಇಮಮೇವ ವರಂ ಮಹ್ಯಂ ದೇಹಿ ಮೇ ಪುತ್ರವತ್ಸಲ || ೧೫ || ಇತಿ ಶರ್ವಸ್ತದಾಕರ್ಣ್ಯ ತಥಾಸ್ತ್ವಿತಿ ವರಂ ದದೌ|ವರದಾನಾತ್ತತೋ ದೇವೋ ಪುನರ್ವಾಕ್ಯ-ಮಿದಂ ಜಗೌ ||೧೬|| ಅತ್ರ ಸ್ನಾತ್ವಾ ನರೋ ಯಸ್ತು ಬ್ರಹ್ಮಯಜ್ಞಂ ಕರೋತಿ ಚ|ಗೋದಾನಾದಿಮಹಾದಾನಂ ಯಃ ಕುರ್ಯಾದ್ಭಕ್ತಿಸಂ-ಯುತಃ ||೧೭|| ಪಿಂಡನಿರ್ವಾಪಣಂ ಚೈವ ವೃಷೋತ್ಸರ್ಗಂ ತಥೈವ ಚ| ಜನ್ಮನೀಹ ಸುಖಂ ಭುಕ್ತ್ವಾ ದೇಹಾಂತೇ ಮೋಕ್ಷಮಾಪ್ನುಯಾತ್ ||೧೮|| ಇತಿ ಸರ್ವಂ ಸಮಾಖ್ಯಾಯ ತತ್ರೈವಾಂತರ್ದಧೇ ಶಿವಃ|ದೇವಾ-ಸರ್ವೇ ತಥೈವೋಕ್ತ್ವಾ ಸ್ವಲೋಕಂ ಪ್ರತ್ಯಯುಸ್ತದಾ||೧೯|| ಅದ್ಯಾಪಿ ರುದ್ರಪಾದೌ ಚ ದೃಶ್ಯತೇ ಪಾಪನಾಶನೌ | ಇತಿ ಸರ್ವಂ ಸಮಾ

---

"ಸ್ವಾಮಿಯೆ! ನನ್ನಲ್ಲಿ ದಯೆಯಿರುವುದಾದರೆ ನನ್ನ ಮಾತನ್ನು ಕೇಳು. ಋಷ್ಯಶೃಂಗಪರ್ವತದ ಬಳಿ ನದೀತೀರದಲ್ಲಿ ಸರ್ವಜನರ ಉಪಕಾರಕ್ಕಾಗಿ ವಾಸಮಾಡಿಕೊಂಡಿರುತ್ತಾ ಸರ್ವಪ್ರಾಣಿಗಳಿಗೆ ಅನ್ನದಾನಮಾಡಿಕೊಂಡಿರುತ್ತೇನೆ. ಬ್ರಾಹ್ಮಣೋಚ್ಛಿಷ್ಟದಲ್ಲಿ ಮಲಗಿದವರ ರೋಗಪರಿಹಾರ ಮಾಡುತ್ತ, ಭೂತಪ್ರೇತಪಿಶಾಚಾದಿಪೀಡೆಯನ್ನು ನಾಶಮಾಡುತ್ತಾ ವಾಸಮಾಡುತ್ತೇನೆ. ಪುತ್ರವಾತ್ಸಲ್ಯದಿಂದ ಈ ವರವನ್ನೇ ನನಗೆ ಕೊಡು" || ೧೫ || ಈ ಮಾತನ್ನು ರುದ್ರದೇವನು ಕೇಳಿ, "ಹಾಗೆಯೇ ಆಗಲೆ"ಂದು ವರವನ್ನಿತ್ತು ಮರಳಿ ಹೇಳಿದನು—'ಈ ಸ್ಥಳದಲ್ಲಿ ಮಿಂದು ಬ್ರಹ್ಮಯಜ್ಞವನ್ನಾಚರಿಸಿ, ಗೋದಾನ ಮೊದಲಾದ ಮಹಾದಾನಗಳನ್ನು ಮಾಡಿ ಪಿತೃಪ್ರೀತ್ಯರ್ಥವಾಗಿ ಪಿಂಡಪ್ರದಾನ ವೃಷೋತ್ಸರ್ಗಗಳನ್ನು ಮಾಡಿದವನು ಇಹದಲ್ಲಿ ಸುಖವನ್ನು ಭೋಗಿಸಿ, ದೇಹಾಂತ್ಯದಲ್ಲಿ ಮೋಕ್ಷವನ್ನು ಹೊಂದುವನು" ಎಂದು ವರವನ್ನಿತ್ತು ರುದ್ರದೇವನು ಅಲ್ಲಿಯೇ ಅದೃಶ್ಯನಾದನು. ಸಮಸ್ತ ದೇವತೆಗಳೂ ಆ ರುದ್ರದೇವರ ವಚನದಂತೆ ನಡೆಯಲೆಂದು ತಮ್ಮ ಲೋಕಕ್ಕೆ ತೆರಳಿದರು. ಆ ಪ್ರತ್ಯಕ್ಷನಾದ ಮಹಾರುದ್ರದೇವನ ರುದ್ರಪಾದಚಿಹ್ನೆಗಳು ಈಗಲೂ ಸರ್ವಪಾಪಪರಿಹಾರಕಗಳಾಗಿ ತೋರುತ್ತವೆ. ಈ ರೀತಿಯಲ್ಲಿ ರುದ್ರಪಾದ

ಖ್ಯಾತಂ ಸರ್ವಪಾಪಪ್ರಣಾಶನಮ್ । ತಸ್ಮಾತ್ಸರ್ವಪ್ರಯತ್ನೇನ ಸುಬ್ರಹ್ಮಣ್ಯಂ ಭಜೇತ್ಸುಧೀಃ ॥ ೨೦ ॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ತ್ರಯೋವಿಂಶೋಽಧ್ಯಾಯಃ ॥ ೨೩ ॥

---

## ಅಥ ಚತುರ್ವಿಂಶೋಽಧ್ಯಾಯಃ

ಋಷಯ ಊಚುಃ–ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಪುನರಸ್ಯ-ದ್ವದ ಪ್ರಭೋ।ಕೃತಾರ್ಥಾಃ ಸ್ಮ ವಯಂ ಸರ್ವೇ ತ್ವತ್ಕಟಾಕ್ಷಾನ್ಮ-ಹಾಮುನೇ ॥೧॥ ಶ್ರೀ ಸೂತ ಉವಾಚ–ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ಪ್ರವಕ್ಷ್ಯಾಮಿ ಸಮಾಸತಃ । ತಸ್ಯ ಮಹಾತ್ಮ್ಯಮತುಲಂ ಶ್ರುತ್ವಾ ಭವಭಯಂ ನ ಹಿ ॥ ೨ ॥ ಸುಬ್ರಹ್ಮಣ್ಯಃ ಕೃತೇ ವಿಪ್ರ ಯುಗೇಽಸೌ ಸ್ಕಂದನಾಮವಾನ್ । ತ್ರೇತಾಯಾಂ ಷಣ್ಮುಖೋ ನಾಮ ದ್ವಾಪರೇ ಶಿಖಿವಾಹನಃ ॥ ೩ ॥ ಸುಬ್ರಹ್ಮಣ್ಯಃ ಕಲೌ ಖ್ಯಾತಃ ಕುಕ್ಕೇಲಿಂಗ-

---

ಮಹಿಮೆಯನ್ನು ನಿಮಗೆ ಹೇಳಿದೆನು. ಆದಕಾರಣ ಸುಬ್ರಹ್ಮಣ್ಯಸ್ವಾಮಿಯನ್ನು ಸರ್ವಪ್ರಯತ್ನದಿಂದಲೂ ಪ್ರಾಜ್ಞನು ಸೇವಿಸತಕ್ಕುದು." ॥ ೨೦ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು ॥ ೨೩ ॥

---

ಋಷಿಗಳೆಂದರು— "ಸೂತಪುರಾಣಿಕನೆ! ನಿನ್ನ ದಯೆಯಿಂದ ನಾವೆಲ್ಲರೂ ಧನ್ಯರಾದೆವು. ಸುಬ್ರಹ್ಮಣ್ಯಸ್ವಾಮಿಯ ಇನ್ನೊಂದು ಮಹಿಮೆಯನ್ನು ಹೇಳು". ಸೂತರೆಂದರು- "ಸಂಕ್ಷೇಪವಾಗಿ ಸುಬ್ರಹ್ಮಣ್ಯನ ಮಹಿಮೆಯನ್ನು ಹೇಳುವೆನು. ಆತನ ಅಸದೃಶ ಮಹಿಮೆಯನ್ನು ಕೇಳಿದರೆ ಸಂಸಾರ ಭಯವಿರುವುದಿಲ್ಲ. ಕೃತಯುಗದಲ್ಲಿ ಸುಬ್ರಹ್ಮಣ್ಯನು ಸ್ಕಂದನೆನಿಸಿರುತ್ತಾನೆ. ತ್ರೇತಾಯುಗದಲ್ಲಿ ಷಣ್ಮುಖನೆನಿಸಿರುತ್ತಾನೆ. ದ್ವಾಪರದಲ್ಲಿ ಮಯೂರವಾಹನನೆನಿಸಿರುತ್ತಾನೆ. ಕಲಿಯುಗದಲ್ಲಿ ಕುಕ್ಕೇಲಿಂಗಸ್ವರೂಪನಾದ ಶಿವನ

ಸಮೀಪತಃ | ಕೃತೇ ರಾಮಗಿರಿರ್ನಾಮ ತ್ರೇತಾಯಾಮೃಷ್ಯಶೃಂಗಕಃ ॥ ೪ ॥ ದ್ವಾಪರೇ ತು ಸ್ಕಂದಧರಃ ಕುಮಾರಾದ್ರಿಃ ಕಲೌ ಯುಗೇ | ಕುಮಾರಧಾರಿಕಾ ಪುಣ್ಯಾ ನದೀನಾಂ ಪ್ರವರಾ ಶುಭಾ ॥ ೫ ॥ ಕುಕ್ಕೇ-ಲಿಂಗಸ್ಯ ಸಾನ್ನಿಧ್ಯೇ ಪ್ರವಹಿಷ್ಯತಿ ಸರ್ವದಾ । ತತ್ರ ಸ್ನಾನಂ ಚ ದಾನಂ ಚ ಬ್ರಹ್ಮಹತ್ಯಾಂ ವ್ಯಪೋಹತಿ ॥ ೬ ॥ ಸುಬ್ರಹ್ಮಣ್ಯಸ್ತ್ವನ್ನದಾತಾ ಸರ್ವೇಷಾಂ ಪ್ರಾಣಿನಾಂ ಸದಾ । ತಸ್ಯ ಸ್ಮರಣಮಾತ್ರೇಣ ಅನ್ನಸಿದ್ಧಿ-ರ್ಭವಿಷ್ಯತಿ ॥ ೭ ॥ ಸುಬ್ರಹ್ಮಣ್ಯೇತಿ ಯನ್ನಾಮ ಪ್ರಾತರುತ್ಥಾಯ ಯಃ ಪಠೇತ್ । ತಸ್ಯ ಪಾಪಾನಿ ನಶ್ಯಂತಿ ಜನ್ಮಾಂತರಭವಾನಿ ಚ ॥ ೮ ॥ ಸುಬ್ರಹ್ಮಣ್ಯಸ್ಯ ಚಾಗ್ರಸ್ಥನದೀಂ ಗಿರಿಮಥಾಪಿ ವಾ | ದೃಷ್ಟ್ವಾ ನತ್ವಾ ತಥಾ ಸ್ತುತ್ವಾ ಕೃತಕೃತ್ಯೋ ಭವಿಷ್ಯತಿ ॥ ೯ ॥ ಸುಬ್ರಹ್ಮಣ್ಯಸ್ಯ ಚಾರಿತ್ರಂ ಸಭಾಯಾಂ ದೇವತಾಲಯೇ | ಗಾಯತ್ರೀಜಪಕಾಲೇಽಪಿ ಪುಣ್ಯತೀರ್ಥ-ಸಮೀಪತಃ ॥ ೧೦ ॥ ಅಶ್ವತ್ಥಮೂಲೇ ಹ್ಯಥವಾ ಬದರೀವೃಕ್ಷಮೂಲಕೇ | ಧಾತ್ರೀವೃಕ್ಷಸ್ಯ ಮೂಲೇ ಚ ಯಃ ಪಠೇತ್ಸುಸಮಾಹಿತಃ ॥ ೧೧ ॥ ಶೃಣೋತಿ ಹ್ಯೇಕಭಾವೇನ ಬ್ರಹ್ಮಲೋಕಂ ಸ ಗಚ್ಛತಿ । ಸುಬ್ರಹ್ಮಣ್ಯಸ್ಯ

---

ಸಮೀಪದಲ್ಲಿ 'ಸುಬ್ರಹ್ಮಣ್ಯ'ನೆಂದು ಪ್ರಸಿದ್ಧನಾಗಿದ್ದಾನೆ. ಕೃತಯುಗದಲ್ಲಿ ಆ ಪರ್ವತವು ರಾಮಪರ್ವತವೆಂದೂ, ತ್ರೇತಾಯುಗದಲ್ಲಿ ಋಷ್ಯಶೃಂಗಪರ್ವತವೆಂದೂ, ದ್ವಾಪರದಲ್ಲಿ ಸ್ಕಂದ ಪರ್ವತವೆಂದೂ, ಕಲಿಯುಗದಲ್ಲಿ ಕುಮಾರ ಪರ್ವತವೆಂದೂ ಪ್ರಸಿದ್ಧವಾಗಿದೆ. ನದಿಗಳಲ್ಲಿ ಶ್ರೇಷ್ಠವಾದ ಕುಮಾರಧಾರೆಯು ॥ ೫ ॥ ಕುಕ್ಕೇಲಿಂಗನ ಸಮೀಪದಲ್ಲಿ ಹರಿಯುತ್ತಾ, ಸ್ನಾನ-ದಾನಾದಿಗಳನ್ನು ಮಾಡಿದವರ ಬ್ರಹ್ಮಹತ್ಯಾಪಾಪವನ್ನು ಕಳೆಯುತ್ತದೆ. ಸುಬ್ರಹ್ಮಣ್ಯನು ನಿತ್ಯದಲ್ಲಿಯೂ ಅನ್ನದಾತನಾಗಿರುವನು. ಆತನನ್ನು ಸ್ಮರಿಸಿದ ಮಾತ್ರದಿಂದ ಅನ್ನವು ದೊರಕುವುದು. ಸುಬ್ರಹ್ಮಣ್ಯನೆಂಬ ನಾಮವನ್ನು ಮುಂಜಾನೆ ಎದ್ದು ಪಠಿಸಿದವನ ಜನ್ಮಜನ್ಮಾಂತರಕೃತ ಪಾಪಗಳು ನಷ್ಟವಾಗುತ್ತವೆ. ಸುಬ್ರಹ್ಮಣ್ಯನ ಇದಿರಿನಲ್ಲಿರುವ ನದಿಯನ್ನು ಮತ್ತು ಪರ್ವತವನ್ನು ಕಂಡು ವಂದಿಸಿ, ಸ್ತುತಿಸಿದರೆ ಧನ್ಯನಾಗುವನು. ಸುಬ್ರಹ್ಮಣ್ಯನ ಚರಿತ್ರೆಯನ್ನು ಸಭೆಯಲ್ಲಿ, ದೇವಾಲಯದಲ್ಲಿ, ಗಾಯತ್ರೀಜಪಕಾಲದಲ್ಲಿ, ಪುಣ್ಯತೀರ್ಥದ ಬಳಿಯಲ್ಲಿ, ॥ ೧೦ ॥ ಅಶ್ವತ್ಥದ ಬುಡದಲ್ಲಿ ಅಥವಾ ಬುಗರೀವೃಕ್ಷದ ಬುಡದಲ್ಲಿ, ನೆಲ್ಲಿ ಮರದ ಬುಡದಲ್ಲಿ ಭಕ್ತಿಯಿಂದ ಪಠಿಸಿದವನೂ ಹಾಗೆಯೇ ಏಕಭಕ್ತಿಯಿಂದ ಕೇಳಿದವನೂ ಬ್ರಹ್ಮಲೋಕಕ್ಕೆ ತೆರಳುವನು. ಸುಬ್ರಹ್ಮಣ್ಯನ

ಮಾಹಾತ್ಮ್ಯಮವತಾರ ಕಥಾಂ ನರಃ ||೧೨|| ಯಃ ಶೃಣೋತಿ ಸದಾ ಭಕ್ತ್ಯಾ ತಸ್ಯ ಶ್ರೀರ್ವಿಜಯೋ ಭವೇತ್ | ಪುರಾಣಪಾಠತಶ್ಚೈವ ಭಕ್ತಿ-ಯುಕ್ತೇನ ಚೇತಸಾ || ೧೩ || ಯಃ ಪೂಜಯತಿ ಧರ್ಮಾತ್ಮಾ ತಸ್ಯ ತುಷ್ಟೋ ಭವಿಷ್ಯತಿ | ಕುಕ್ಕೇಲಿಂಗಸ್ಯ ಮಹಾತ್ಮ್ಯಮವತಾರಕಥಾಂ ನರಃ || ೧೪ || ಯಃ ಶೃಣೋತಿ ಸದಾ ಭಕ್ತ್ಯಾ ತಸ್ಯ ಮುಕ್ತಿಃ ಕರೇ ಸ್ಥಿತಾ| ಅಸ್ಯ ದೇವಸ್ಯ ಮಹಾತ್ಮ್ಯಂ ಲಿಖಿತ್ವಾ ಯಸ್ತು ಪೂಜಯೇತ್ ||೧೫|| ಪ್ರಯಾತಿ ವಿಷ್ಣು ಸಾಯುಜ್ಯಂ ಪುನರಾವೃತ್ತಿವರ್ಜಿತಮ್ | ಬ್ರಹ್ಮಗರ್ಭಸ್ಯಚಾರಿತ್ರಂ ಯೋ ವದೇದ್ಭಕ್ತಿಸಂಯುತಃ| ತಸ್ಯ ಪುತ್ರಾಶ್ಚ ಪೌತ್ರಾಶ್ಚ ಭವಿಷ್ಯಂತಿ ನ ಸಂಶಯಃ || ೧೬ || ಪುತ್ರಂ ಚ ಪೌತ್ರಧನ-ಧಾನ್ಯ ಸುವರ್ಣವೃದ್ಧಿಂ ಭೂಮಿಂ ಸಮಸ್ತಫಲದಾಮಪಿ ಯೇಽರ್ಥ-ಯಂತೇ | ತೇ ಪ್ರಾಪ್ನುವಂತಿ ಸಕಲಂ ಗುಣರೂಪವಿದ್ಯಾ ಭಕ್ತ್ಯಾ ಪಠಂತಿ ಚರಿತಂ ಸತತಂ ಗುಹಸ್ಯ||೧೭|| ಸುಬ್ರಹ್ಮಣ್ಯಸ್ಯ ಮಹಾತ್ಮ್ಯಂ ವಕ್ತಾರಂ ಚ ದ್ವಿಜೋತ್ತಮಮ್ | ಯಃ ಪೂಜಯತಿ ಭಕ್ತ್ಯಾ ತು ಶ್ರವಣಸ್ಯ ಫಲಂ ಲಭೇತ್ || ೧೮ || ಕುಕ್ಕೇಲಿಂಗಸ್ಯ ಮಹಾತ್ಮ್ಯಂ

---

ಮಹಿಮೆಯನ್ನೂ ಆತನ ಅವತಾರಚರಿತ್ರೆಯನ್ನೂ ಯಾವನು ಭಕ್ತಿಯಿಂದ ಕೇಳುವನೋ ಆತನಿಗೆ ಸಂಪತ್ತೂ ವಿಜಯವೂ ಲಭಿಸುವುದು. ಭಕ್ತಿಯುಕ್ತವಾದ ಮನಸ್ಸಿನಿಂದ ಈ ಪುರಾಣವನ್ನು ಪಠಿಸಿದರೆ, ಭಕ್ತಿಯಿಂದ ಸುಬ್ರಹ್ಮಣ್ಯನನ್ನು ಪೂಜಿಸಿದರೆ, ಧರ್ಮಸ್ವರೂಪನಾದ ಸುಬ್ರಹ್ಮಣ್ಯ ಸ್ವಾಮಿಯು ಪ್ರಸನ್ನನಾಗುವನು. ಹಾಗೆಯೇ, ಕುಕ್ಕೇಲಿಂಗದ ಮಹಿಮೆಯನ್ನೂ ಅವತಾರಕಥೆಯನ್ನೂ ಭಕ್ತಿಯಿಂದ ಕೇಳಿದವನಿಗೆ ಮುಕ್ತಿಯು ಕೈವಶವಾಗುವುದು. ಈ ದೇವನ ಮಹಿಮೆಯನ್ನು ಬರೆದು ಪೂಜಿಸಿದರೆ, || ೧೫ || ಆ ಮನುಷ್ಯನು ಮರಳಿ ಹಿಂತಿರುಗದಿರುವ ವಿಷ್ಣುಸಾಯುಜ್ಯಮೋಕ್ಷವನ್ನೇ ಹೊಂದುವನು. ಸುಬ್ರಹ್ಮಣ್ಯನ ಚರಿತ್ರೆಯನ್ನು ಭಕ್ತಿಯಿಂದ ಹೇಳಿದವನಿಗೆ ಪುತ್ರರೂ ಪೌತ್ರರೂ ನಿಸ್ಸಂಶಯವಾಗಿ ಹುಟ್ಟುವರು. ಪ್ರಾರ್ಥಿಸತಕ್ಕವರು ಭಕ್ತಿಯಿಂದ ಸುಬ್ರಹ್ಮಣ್ಯನ ಚರಿತ್ರೆಯನ್ನು ಪಠಿಸಿದರೆ, ಪುತ್ರ-ಪೌತ್ರ-ಧನ-ಧಾನ್ಯ-ಸುವರ್ಣಗಳ ಅಭಿವೃದ್ಧಿಯನ್ನೂ, ಸಮಸ್ತ ಧಾನ್ಯಫಲಗಳನ್ನೀಯುವ ಭೂಮಿಯನ್ನೂ, ಸಮಸ್ತ ಇಷ್ಟಾರ್ಥವನ್ನೂ, ಗುಣ-ರೂಪ-ವಿದ್ಯೆಗಳನ್ನೂ ಹೊಂದುವರು. ಸುಬ್ರಹ್ಮಣ್ಯಸ್ವಾಮಿಯ ಈ ಮಹಾತ್ಮ್ಯವನ್ನು ಉಪದೇಶಿಸುವ ಬ್ರಾಹ್ಮಣ

ಶ್ರುತ್ವಾ ಯಸ್ತು ಪ್ರಪೂಜಯೇತ್ । ತಸ್ಯ ಶ್ರೀವಿಜಯಾರೋಗ್ಯಂ ಸಂತತಿಶ್ಚ ಭವಿಷ್ಯತಿ ॥೧೯॥ ತಸ್ಮಾತ್ಸರ್ವಪ್ರಯತ್ನೇನ ಭಕ್ತ್ಯಾಪೂಜ್ಯಃ ಸುರೇಶ್ವರಃ॥ಇತ್ಥಂ ಶುತ್ವಾ ತು ಮುನಯಃ ಪಾದ್ಯಾರ್ಘ್ಯಾಚಮನಾ-ದಿಭಿಃ॥ಸೂತಂ ಪೌರಾಣಿಕಶ್ರೇಷ್ಠಂ ಪೂಜಯಾಮಾಸುರಂಜಸಾ ॥೨೦॥

ಇತಿ ಶ್ರೀಸ್ಕಾಂದೇ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣೇ
ಚತುರ್ವಿಂಶೋಽಧ್ಯಾಯಃ ॥ ೨೪ ॥

॥ ಶ್ರೀ ಕೃಷ್ಣಾರ್ಪಿತಮಸ್ತು ॥

ವಿಸರ್ಗಬಿಂದುಮಾತ್ರಾಣಿ ಪದಪಾದಾಕ್ಷರಾಣಿ ಚ । ನ್ಯೂನಾನಿ ಚಾತಿರಿಕ್ತಾನಿ ಕ್ಷಮಸ್ವ ಪರಮೇಶ್ವರ ॥ ಪಾದಂ ವಾಪ್ಯರ್ಧಪಾದಂ ವಾ ಶ್ಲೋಕಂ ಶ್ಲೋಕಾರ್ಧಮೇವ ವಾ । ನಿತ್ಯಂ ಧಾರಯತೇ ವಿಪ್ರಃ ಸ ಮೋಕ್ಷಮಧಿಗಚ್ಛತಿ ॥ ಕಾಯೇನ ವಾಚಾ ಮನಸೇಂದ್ರಿ-ಯೈರ್ವಾ ಬುಧ್ಯಾತ್ಮನಾವಾನುಸೃತಃ ಸ್ವಭಾವಮ್ । ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥ ಅಬದ್ಧಾಂ ವಾ ಸುಬದ್ಧಾಂ ವಾ ಸರಸಾಂ ವ್ಯಾಪಿ ನೀರಸಾಮ್ । ಮಮೈವ ವಾಙ್ಮಯೀಂ ಪೂಜಾಂ ಆದತ್ಸ್ವ ಪುರುಷೋತ್ತಮ ॥

ಇತಿ ಸುಬ್ರಹ್ಮಣ್ಯಕ್ಷೇತ್ರಪುರಾಣಂ ಸಮಾಪ್ತಮ್

---

ನನ್ನು ಯಾವನು ಭಕ್ತಿಯಿಂದ ಪೂಜಿಸುವನೋ, ಆತನೂ ಈ ಪುರಾಣ ಶ್ರವಣದ ಫಲವನ್ನು ಹೊಂದುವನು. ಕುಕ್ಕೇಲಿಂಗನ ಮಹಿಮೆಯನ್ನು ಕೇಳಿ ಪೂಜಿಸಿದರೆ ಆತನಿಗೆ ಸಂಪತ್ತು-ವಿಜಯ-ಆರೋಗ್ಯ-ಸಂತತಿಗಳು ವೃದ್ಧಿ ಹೊಂದುವುವು. ಆದಕಾರಣ ಸರ್ವಪ್ರಯತ್ನದಿಂದಲಾದರೂ ದೇವಶ್ರೇಷ್ಠನಾದ ಸುಬ್ರಹ್ಮಣ್ಯಸ್ವಾಮಿಯನ್ನು ಸೇವಿಸತಕ್ಕುದು". ಇಂತೆಂದು ಉಪದೇಶಿಸಿದ ಸೂತಪುರಾಣಿಕಶ್ರೇಷ್ಠನನ್ನು ಶೌನಕಾದಿಮುನಿಗಳು ಪಾದ್ಯ-ಅರ್ಘ್ಯ-ಆಚಮನ ಮೊದಲಾದ ಉಪಚಾರಾದಿಗಳಿಂದ ಚೆನ್ನಾಗಿ ಸನ್ಮಾನಿಸಿದರು ॥ ೨೦ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು ॥ ೨೪ ॥

ಶ್ರೀ ಸುಬ್ರಹ್ಮಣ್ಯಕ್ಷೇತ್ರಪುರಾಣವು ಸಮಾಪ್ತವಾದುದು.